CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೩೦, ೨೦೦೫ (ಆಷಾಢ ೯, ಶಕ ವರ್ಷ ೧೯೨೭) | ಸಂಚಿಕೆ ೨೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ-22/2004 ದಿನಾಂಕ: 25ನೇ ಮೇ 2005**

**ಅರ್ಜಿದಾರರು :**

1. ಶ್ರೀಮತಿ ಅಂಬಿಕಾ, ಕೋಂ ಲೇಟ್ ರಂಗನಾಥ್
2. ಶ್ರೀಮತಿ ಅಂಜನಮ್ಮ ಕೋಂ ಲೇಟ್ ವೆಂಕಟರಮಣಪ್ಪ, ಗೌಡನಹಳ್ಳಿ ಅಂಚೆ, ಮಡಕಸಿರಾ ತಾ: ಅನಂತಪುರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಹೆಚ್. ನಾರಾಯಣಸ್ವಾಮಿ, ಬಿನ್ ಹನುಮಂತಪ್ಪ, ತೇರಿನಾ ಬೀದಿ, ದೊಡ್ಡಬಳ್ಳಾಪುರ ತಾ:
2. ನ್ಯಾಷನಲ್ ಇನ್ಸ್ಯೂರೆನ್ಸ್ ಕಂ.ಲಿ., ನಂ.1974, ಸಿನಿಮಾ ರಸ್ತೆ, ದೊಡ್ಡಬಳ್ಳಾಪುರ.

**ಪ್ರಕಟಣೆ**

ಅರ್ಜಿದಾರರಾದ 1. ಅಂಬಿಕಾ 2. ಅಂಜನಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ರಂಗನಾಥ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

ಪಿ.ಆರ್.836

### ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-2, ಬಿಜಾಪುರ

**ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮಪ್ರ:ಎಸ್‌ಆರ್-117/2005 ದಿನಾಂಕ: 3ನೇ ಜೂನ್ 2005**

**ಅರ್ಜಿದಾರರು :**

1. ಗುಲಾಬ ತಂದೆ ಲಾಲು ರಾಠೋಡ
2. ಶೇಕ್ಕುಬಾಯಿ ಗಂಡ ಗುಲಾಬ ರಾಠೋಡ ವಾಸ: ಲಗವಿ, ತಾ: ಜಿ: ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ವಿಜಯ ಬಾಪೂಸಾ ರಾವನ ಮಾಲೀಕರು ಟ್ರಾಕ್ಟರ್ ಸಂಖ್ಯೆ-ಎಂಎಚ್-09:6392
2. ವಾಸ: ಔರವಾಡ, ತಾಲ್ಲೂಕ ಶಿರೋಳ, ಜಿಲ್ಲೆ, ಸಾಂಗ್ಲೀ (ಮಹಾರಾಷ್ಟ್ರ ರಾಜ್ಯ).

**ಪ್ರಕಟಣೆ**

ಶ್ರೀ: ಶ್ರೀಮತಿ: ಗುಲಾಬ ತಂದೆ ಲಾಲು ರಾಠೋಡ 2) ಶೆಕ್ಕುಬಾಯಿ ಗಂಡ ಗುಲಾಬ ರಾಠೋಡ ಇವರುಗಳಾದ ತಾವು ಮೃತ ಸುನೀತಾಬಾಯಿ ಇವರ ತಂದೆ-ತಾಯಿ ಮತ್ತು......... ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಇವರು ಒಂದನೇ ಪ್ರತಿವಾದಿಗಳಾದ ವಿಜಯ ಬಾಪೂಸಾ ರಾವನ ಇವರ ಟ್ರಾಕ್ಟರ್ ಸಂಖ್ಯೆ: ಎಂಎಚ್-09:6392 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.837 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮಪ್ರ:ಎಸ್ಆರ್-114/2005 ದಿನಾಂಕ: 3ನೇ ಜೂನ್ 2005**

**ಅರ್ಜಿದಾರರು :**

1. ರೇಖಾ ಗಂಡ ಕಾಶೇಪ್ಪ ಪೂಜಾರಿ
2. ಇಂದೂಬಾಯಿ ಜೇಟೆಪ್ಪ ಪೂಜಾರಿ
3. ಜೇಟೆಪ್ಪ ಹೋನಪ್ಪ ಪೂಜಾರಿ
   ವಾಸ: ಸುಲರ್ಜವಾಲಿಜ ತಾಲ್ಲೂಕು: ಅಕ್ಕಲಕೋಟ
   ಜಿಲ್ಲೆ: ಸೋಲ್ಲಾಪುರ ಸದ್ಯದ ವಾಸ: ಕನ್ನೂರ,
   ಜಿಲ್ಲೆ, ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

ಮಲಕಪ್ಪ ತೋಟಪ್ಪ ಬೀಕೆ ಮಾಲೀಕರು: ಟ್ರಾಕ್ಟರ್ ಸಂಖ್ಯೆ:
ಎಂಎಚ್-13-ಎ-6919 ಎಟ್ಟಿಪೋಸ್ಟ-ಸುಲರ್ಜವಾಲಿಜ
ತಾಲ್ಲೂಕ-ಅಕ್ಕಲಕೋಟ ಜಿಲ್ಲೆ: ಸೋಲ್ಲಾಪುರ (ಮಹಾರಾಷ್ಟ್ರ ರಾಜ್ಯ)

**ಪ್ರಕಟಣೆ**

ಶ್ರೀ: ಶ್ರೀಮತಿ: 1)ರೇಖಾ ಗಂಡ ಕಾಶೇಪ್ಪ ಪೂಜಾರಿ 2) ಇಂದೂಬಾಯಿ ಜೇಟೆಪ್ಪ ಪೂಜಾರಿ 3) ಜೇಟೆಪ್ಪ ಹೋನಪ್ಪ ಪೂಜಾರಿ ಇವರುಗಳಾದ ತಾವು ಮೃತ ಕಾಶೇಪ್ಪ ಜೇಟೆಪ್ಪ ಪೂಜಾರಿ ಇವರ ಹೆಂಡತಿ ಮತ್ತು ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಕಾಶೇಪ್ಪ ಜೇಟೆಪ್ಪ ಪೂಜಾರಿ ಇವರು ಒಂದನೇ ಪ್ರತಿವಾದಿಗಳಾದ ಮಲಕಪ್ಪ ತೋಟಪ್ಪ ಬೀಕೆ ಇವರ ಟ್ರಾಕ್ಟರ್ ಸಂಖ್ಯೆ: ಎಂಎಚ್:13:ಎ-6919 ರಲ್ಲಿ ಕ್ಲೀನರ್ ಕಂ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.838 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮಪ್ರ:ಎಸ್ಆರ್-113/2005 ದಿನಾಂಕ: 1ನೇ ಜೂನ್ 2005**

**ಅರ್ಜಿದಾರರು :**

1. ರೇವಣಸಿದ್ದ ಗುರುಮಲ್ಲಪ್ಪ ಕೋಟ್ಟಳಗಿ
   ವಾಸ: ಗೋಡಿಹಾಳ, ತಾ: ಇಂಡಿ
2. ಶ್ರೀಮತಿ ಬಾಳಮ್ಮ ಗಂಡ ರೇಮಾಸಿದ್ದ ಕೋಟ್ಟಳಗಿ
   ವಾಸ: ಗೋಡಿಹಾಳ ತಾ: ಇಂಡಿ ಸದ್ಯದವಾಸ
   ಮುರನಕೇರಿ, ಬಾಗಲಕೋಟೆ ರೋಡ ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ಬಸನಗೌಡ ಬಿ. ಹರನಾಳ,
   ಮ್ಯಾನೇಜಿಂಗ್ ಡೈರೇಕ್ಟರ್ ಆ್ಯಂಡ ಕ್ಲಾಸ್ 1 ಕಾಂಟ್ರೇಕ್ಟರ್
   ಮಾರುತಿ ಡಿಟೇಕ್ಟಿವ್ ಆ್ಯಂಡ್ ಸೇಕ್ಯೂರಿಟಿ ಏಜೇನ್ಸಿ
   ಮನೆ ನಂ.100, ಅಜರೇಕರಚಾಳ ಹತ್ತಿರ, ಮಿನಾಕ್ಷಿಚೌಕ
   ಬಿಜಾಪುರ.
2. ಬ್ರ್ಯಾಂಚ್ ಮ್ಯಾನೇಜರ್
   ಬಜಾಜ್ ಅಲೈನ್ಸ್ ಇನ್ಸೂರೇನ್ಸ್ ಕಂ.ಲಿ., ಹುಬ್ಬಳ್ಳಿ
3. ದಿ ಅಸಿಸ್ಟೆಂಟ್ ಇಂಜಿನೀಯರ್ (ಇ) 33:11 ಕೆವಿಎ ಸ್ಟೇಶನ್
   ಕೆಪಿಟಿಸಿಎಲ್ (ಹೆಸ್‌ಕಾಂ) ತಾಂಬಾ ತಾಲ್ಲೂಕ ಇಂಡಿ,
4. ದಿ ಎಕ್ಸಿಕ್ಯೂಟೀವ್ ಇಂಜಿನೀಯರ್ ಓ ಆ್ಯಂಡ್ ಎಂ.
   ಡಿವಿಜನ್ ಕೆಪಿಟಿಸಿಎಲ್, ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ: 1) ರೇವಣಸಿದ್ದ ಗುರುಮಲ್ಲಪ್ಪ ಕೋಟ್ಟಳಗಿ 2) ಶ್ರೀಮತಿ ಬಾಳಮ್ಮ ಗಂಡ ರೇವಣಸಿದ್ದ ಕೋಟ್ಟಳಗಿ ಇವರುಗಳಾದ ತಾವು ಮೃತ ನಾಗೇಶ ಕೋಟ್ಟಳಗಿ ಇವರ ತಂದೆ ತಾಯಿ ಮತ್ತು......... ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ನಾಗೇಶ ಕೋಟ್ಟಳಗಿ ಇವರು ಒಂದನೇ ಪ್ರತಿವಾದಿಗಳಾದ ದಿ ಅಸಿಸ್ಟೆಂಟ್ ಇಂಜಿನಿಯರ್ (ಇ) 33:11 ಕೆವಿಎ ಸ್ಟೇಶನ್

ಕೆಪಿಟಿಸಿಎಲ್ (ಹೆಸಕಾಂ) ತಾಂಬಾ ತಾಲ್ಲೂಕ್ ಇಂಡಿ, 4) ದಿ ಎಕ್ಸಿಕ್ಯೂಟೀವ್ ಇಂಜಿನೀಯರ್ ಓ ಅಂಡ್ ಎಂ. ಡಿವಿಜನ್ ಕೆಪಿಟಿಸಿಎಲ್ ಬಿಜಾಪುರ ಇವರ ರಲ್ಲಿ ಆಪರೇಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್.839 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ

## ಸಂಖ್ಯೆ:ಡಬ್ಲ್ಯೂಸಿಎ:23:05/2006 ದಿನಾಂಕ: 12ನೇ ಮೇ 2005

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಕಾಸಮ್ಮ ಕೋಂ ಲೇಟ್ ನಿರಂಜನ್
2. ಪಾವರ್ತಮ್ಮ ಲೇಟ್ ನಿರಂಜನರವರ ಮಗಳು
3. ಶಾರದಮ್ಮ ಲೇಟ್ ನಿರಂಜನರವರ ಮಗಳು
4. ಮೊಗಲಾಲ್ ಬಿನ್ ಲೇಟ್ ನಿರಂಜನ
   ತಲಕಾಪಲ್ಲಿ ಗ್ರಾಮ, ಅಚಮ್‌ಪೇಟ್,
   ನಾಗರಕರ್ನೂಲ್ ತಾ: ಮೆಹಬೂಬ್ ನಗರ ಜಿಲ್ಲೆ,
   ಆಂಧ್ರಪ್ರದೇಶ್
   **ಹಾಲಿವಾಸ:** ಹೊಸ ಜಿಲ್ಲಾಧಿಕಾರಿಗಳ ಸಂಕೀರ್ಣ
   ನಾಗಾರ್ಜುನ ಕಟ್ಟಡ ನಿರ್ಮಾಣ ಕಂಪನಿ,
   ಚಾಮರಾಜನಗರ ಟೌನ್.

ಪ್ರತಿವಾದಿಗಳು:

1. ಪ್ರಾದೇಶಿಕ ಕಛೇರಿ, ನಾಗಾರ್ಜುನ ಕನ್‌ಸ್ಟ್ರಕ್ಷನ್ ಕಂ.ಲಿ., ನಂ.301, ಬಾಟವಿ ಛೆಂಬರ್ 8, ಕುಮಾರ ಪಾರ್ಕ್ ರಸ್ತೆ.

### ಸಾರ್ವಜನಿಕ ನೋಟೀಸ್

ಮೃತ ನಿರಂಜನ್ ಇವರ ಹೆಂಡತಿ ಮತ್ತು ಮಕ್ಕಳಾದ ಶ್ರೀಮತಿ: ಕಾಸಮ್ಮ, ಪಾವರ್ತಮ್ಮ, ಶಾರದಮ್ಮ, ಮೊಗಲಾಲ್ ಇವರುಗಳು ಈ ನ್ಯಾಯಾಲಯದಲ್ಲಿ ದಿನಾಂಕ: 12.5.2005 ರಂದು ಅರ್ಜಿ ದಾಖಲಿಸಿ, ಮೃತ ನಿರಂಜನ್ 1ನೇ ಪ್ರತಿವಾದಿ ಕಂಪನಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 15.4.2004 ರಂದು ಮೃತಪಟ್ಟಿರುತ್ತಾರೆಂದು ತಿಳಿಸಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೋರಿ ಅರ್ಜಿಯನ್ನು ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತರ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಎನ್. ಕಲು ಮಾಳಿಗೆಗೌಡರು**

ಪಿ.ಆರ್.840 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29

## ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ-39:2004 ದಿನಾಂಕ: 25ನೇ ಮೇ 2005

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು:**

1. ಬೋರೇಗೌಡ ಬಿನ್ ಕಲ್ನಾ ಬೋರಯ್ಯ, ನಂ.82, 20ನೇ ಮುಖ್ಯ ರಸ್ತೆ, ಜೆ.ಸಿ. ನಗರ, ಬೆಂಗಳೂರು (ಕುರುಬರ ಹಳ್ಳಿ).

ಪ್ರತಿವಾದಿಗಳು:

1. ಶ್ರೀ ಚೆನ್ನಪ್ಪ ಬ್ರಹ್ಮಶೆಟ್ಟರ್, ಬಿನ್ ಶಿವಪ್ಪ, ನಂ.17.25, 7ನೇ ಕ್ರಾಸ್, ಕುರುಬರಹಳ್ಳಿ, ಬೆಂಗಳೂರು-86.
2. ಡೆಪ್ಯೂಟಿ ಮ್ಯಾನೇಜರ್, ನ್ಯಾಷನಲ್ ಇನ್ಸ್ಯೂರೆನ್ಸ್ ಕಂ.ಲಿ., ಎಂ.ಜಿ.ರಸ್ತೆ, ಬೆಂಗಳೂರು-1.

### ಪ್ರಕಟಣೆ

ಅರ್ಜಿದಾರರಾದ ಬೋರೇಗೌಡ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ರಾಜು ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.841 ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

**ಪೊಲೀಸ್ ಇನ್ಸ್‌ಪೆಕ್ಟರ್ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ ಬೆಂಗಳೂರು ನಗರ.**

**ವಿಷಯ :** ಅಮಾನತ್ತುಪಡಿಸಿಕೊಂಡಿರುವ ವಾಹನಗಳ ಮಾಲೀಕರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ :** ಕಾಮಾಕ್ಷಿಪಾಳ್ಯ ಠಾಣೆಯ ಮಾಲು ಪಟ್ಟಿ ನಂ.152/98, 158/98, 212/98, 167/99, 177/99, 52/00, 53/00, 54/00, 08/01, 163/02 33/04 ಮತ್ತು 34/04.

ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಯ ಮೇಲ್ಕಂಡ ಮಾಲುಪಟ್ಟಿ ನಂಬರ್‌ಗಳಲ್ಲಿ ವಾಹನಗಳನ್ನು ಅಮಾನತ್ತುಪಡಿಸಿಕೊಂಡಿದ್ದು ಸದರಿ ದ್ವಿಚಕ್ರ ವಾಹನಗಳ ವಾರಸುದಾರರ ಪತ್ತೆಯ ಬಗ್ಗೆ ಇದುವರೆಗೆ ಎಲ್ಲಾ ಪ್ರಯತ್ನ ಮಾಡಲಾಗಿ ಪತ್ತೆಯಾಗಿರುವುದಿಲ್ಲ. ಸದರಿ ದ್ವಿಚಕ್ರ ವಾಹನಗಳ ವಾರಸುದಾರರ ಪತ್ತೆಗಾಗಿ ಈ ಪ್ರಕಟಣೆಯನ್ನು ಮಾಡಲಾಗಿರುತ್ತದೆ.

| Sl. No. | P.F.No. | Crime/ Miss No. | Vehicle No. | Engine No | Chasis No | Colour |
|---|---|---|---|---|---|---|
| 1. | 152/1998 | 362/1998 | KA-05-X-3355 | 16EBOM82405 | 16CBDM83649 | Scooter Cement Colour. |
| 2. | 152/1998 | 362/1998 | KA-01-4753 | A509M161246 | A509F177550 | TVS-50. Green colour |
| 3. | 152/1998 | 362/1998 | KA-03-H-2005 | A7-03M583987 | A703F600977 | TVS-50. Green colour |
| 4. | 152/1998 | 362/1998 | KA-05-X-6684 | 16EBEA 11340 | 16CBEA00329 | BajajM-80 Red Colour |
| 5. | 152/1998 | 362/1998 | KA-11-H-4098 | - | A608F440977 | TVS-50. Green colour |
| 6. | 152/1998 | 362/1998 | TN-37-K-5756 | 7507M576407 | 7507F532995 | Suzuki Samurai Black Color |
| 7. | 212/1998 | 557/1998 | CKW-8124 | 985690 | 951130 | Chetak Cement clr |
| 8. | 167/1999 | 607/1999 | KA-02-W-3117 | - | 857193 | TVS-XL Green |
| 9. | 177/1999 | 618/1999 | KKA-02-U-7226 | - | 695179 | TVS-50 Green |
| 10. | " | " | CAI-5829 | 36161-03-82 | - | TVS-50-XL Red |
| 11. | 53/2000 | 185/2000 | KA-01-M-852 | - | 8645551-510898 | Maruthi-800 White colour |
| 12. | 08/2001 | 37/2001 | KA-03-EB-5149 | 7006M-730090 | 7006F-678390 | SuzuklSamuri Black |
| 13. | 163/2002 | 163/2002 | CAN-4697 | 03E-232921 | 04C-215363 | Bajaj Chetak Blue Colour |
| 14. | 52/2000 | 32/2000 u/s 379 IPC | KA-01-7769 | - | - | Mahendra Jeep Gray colour |
| 15. | 54/2000 | " | KL-01-M-9763 | DX-13993 | 510DPAX-DX-13993 | Mahendra Jeep Cement colour |
| 16. | " | " | KL-10-H-3103 | 7804-M-35082 | 804-F-302082 | Suzuki Samuri |
| 17. | 33/2004 | 160/2004 | KA-01-Q-2000 | MF11198 | - | Herohonda CD-100 Red Colour |
| 18. | 37/2004 | 175/2004 | CKE-7168 | 30ED 11714 | 30CO11750 | Kawasaki Black |

**ಎ. ಜಿ. ಕೈಸರ್**
ಪೊಲೀಸ್ ಇನ್ಸ್‌ಪೆಕ್ಟರ್ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ
ಬೆಂಗಳೂರು ನಗರ.

**ಪೊಲೀಸ್ ಇನ್ಸ್‌ಪೆಕ್ಟರ್ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ ಬೆಂಗಳೂರು ನಗರ.**

**ವಿಷಯ :** ಅಮಾನತ್ತುಪಡಿಸಿಕೊಂಡಿರುವ ವಾರಸುದಾರರಿಲ್ಲದ ಮಾಲುಗಳ ಮಾಲೀಕರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:** ಸಿಮಿಸ್ ನಂ.137/2000 ಪಿ.ಎಫ್. ನಂ.41/2000.

ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಯಲ್ಲಿ ದಿನಾಂಕ: 22.03.2000 ರಂದು ಪಿರ್ಯಾದುದಾರರಾದ ಶ್ರೀ ಮುನಿಕೃಷ್ಣಪ್ಪ ಬಿನ್ ವಾಸು 37 ವರ್ಷ, ವಿನಾಯಕನಗರ ಕಾಮಾಕ್ಷಿಪಾಳ್ಯ ಬೆಂಗಳೂರು-79, ರವರು ಠಾಣೆಗೆ ಹಾಜರಾಗಿ, ತಾವು ಮಾಗಡಿ ರಸ್ತೆ ಚೆಕ್ ಪೋಸ್ಟ್ ಹತ್ತಿರ ಎಳನೀರು ಅಂಗಡಿ ಇಟ್ಟುಕೊಂಡಿದ್ದು 22.03.2000 ರಂದು ಮಧ್ಯಾಹ್ನ ಸುಮಾರು 02.00 ಗಂಟೆಯಲ್ಲಿ ಮೇಲ್ಕಂಡ ಸ್ಥಳದಲ್ಲಿ ಎಳನೀರು ವ್ಯಾಪಾರ ಮಾಡುತ್ತಿರುವಾಗ್ಗೆ ಅಂಗಡಿ ಹತ್ತಿರ ಯಾರೋ ಒಂದು ಲೇದರ್ ಬ್ಯಾಗ್‌ನ್ನು ಇಟ್ಟು ಅದರಲ್ಲಿ ಈ ಕೆಳಕಂಡ ಮಾಲುಗಳನ್ನು ಬಿಟ್ಟು ಹೋಗಿದ್ದು ಆ ಮಾಲುಗಳು ಯಾರದೆಂದು ಗೊತ್ತಿಲ್ಲದ ಕಾರಣ ಠಾಣೆಗೆ ತಂದು ಹಾಜರುಪಡಿಸಿದ್ದು ಠಾಣಾ ಸಿಮಿಸ್ ನಂ.137/2003 ರಲ್ಲಿ ನಮೂದಿಸಿ ಮಾಲುಪಟ್ಟಿ ಸಂಖ್ಯೆ 41/2000 ರಲ್ಲಿ ಅಮಾನತ್ತುಪಡಿಸಿರುತ್ತೆ. ಸದರಿ ಮಾಲುಗಳ ಬಗ್ಗೆ ಈ ವರೆಗೆ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

| ಕ್ರ. ಸಂ. | ಮಾಲುಪಟ್ಟಿ ನಂಬರ್ | ಸಿಮಿಸ್ ನಂ. | ಮಾಲುಗಳು |
|---|---|---|---|
| 1. | 41/2000 | 137/2000 | 1. ಒಂದು ಸಿಡಿ ಪ್ಲೇಯರ್ ನಂ.152075 (ಪೋರ್ಟಬಲ್ ವಿಡಿಯೋ ಸಿಡಿ ಪ್ಲೇಯರ್)<br>2. ಒಂದು ಸೋನಿ ವಿಡಿಯೋ ಸಿಡಿ ಆರ್.ಎಂ.ಟಿ. ಡಿ.ವಿ-10.<br>3. ಒಂದು ಸೋನಿ ಎಸಿ ಪವರ್ ಅಡಾಪ್ಟರ್ ನಂ.ಎಸಿ-ಎಂ.ಜಡ್.60<br>4. ಒಂದು ಸಿಡಿ ಪ್ಲೇಯರ್ ಟೆಕ್‌ನಿಕ್ಸ್ ಆರ್ ಎಫ್-ಕನ್‌ವರ್‌ಟರ್<br>5. ಒಂದು ಲೇದರ್ ಬ್ಯಾಗ್ |

ಎ. ಜಿ. ಕೈಸರ್

ಪಿ.ಆರ್.843 ಪೊಲೀಸ್ ಇನ್ಸ್‌ಪೆಕ್ಟರ್ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ
ಬೆಂಗಳೂರು ನಗರ.

## ಜಿಲ್ಲಾಧಿಕಾರಿಗಳ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ ಕೊಡಗು ಜಿಲ್ಲೆ, ಮಡಿಕೇರಿ-571201

## ಅಧಿಕೃತ ಜ್ಞಾಪನ

### ಪತ್ರ ಸಂಖ್ಯೆ: ಬಿ5 ಇತರೆ:99:2005-06 ದಿನಾಂಕ: 30ನೇ ಮೇ 2005

**ವಿಷಯ :** ಸೋಮವಾರಪೇಟೆಯ ಸಾರ್ವಜನಿಕ ಆಸ್ಪತ್ರೆ ಇಲ್ಲಿ ಖಾಲಿ ಇರುವ ದಂತ ವೈದ್ಯರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧೀನ ಕಾರ್ಯದರ್ಶಿಯವರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಆಕುಕ/627/ಹೆಚ್‌ಎಸ್‌ಹೆಚ್/ 2004 ದಿನಾಂಕ: 9.2.2005

2. ಜಿಲ್ಲಾಧಿಕಾರಿಯವರ ಕಛೇರಿ, ಮಡಿಕೇರಿ ಇಲ್ಲಿ ದಿನಾಂಕ: 24.05.2005 ರಂದು ನಡೆದ ಸಂದರ್ಶನ

ಉಲ್ಲೇಖ (1)ರ ಸರ್ಕಾರದ ಆದೇಶದ ಪ್ರಕಾರ ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಜಿಲ್ಲಾಧಿಕಾರಿಗಳಿಗೆ ಅನುಮತಿ ನೀಡಿರುವ ಮೇರೆಗೆ ಉಲ್ಲೇಖ (2)ರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ತೀರ್ಮಾನದಂತೆ ಸಾರ್ವಜನಿಕ ಆಸ್ಪತ್ರೆ, ಸೋಮವಾರಪೇಟೆ ಇಲ್ಲಿಗೆ ಕೆಳಕಂಡ ದಂತ ವೈದ್ಯರನ್ನು ಆಯ್ಕೆ ಮಾಡಿ ಮಾಹೆಯಾನ ರೂ.11000/- (ಹನ್ನೊಂದು ಸಾವಿರ ಮಾತ್ರ) ದಂತೆ ನಿಗದಿಪಡಿಸಿ ನೇಮಕ ಮಾಡಲಾಗಿದೆ.

**ಸೂಚನೆ :** ಗುತ್ತಿಗೆ ವೈದ್ಯರ ನೇಮಕಾತಿಯು ಒಂದು ವರ್ಷದ ಅವಧಿಯಾಗಿದ್ದು/ ಮುಂದಿನ ಆದೇಶದ ಮೇರೆಗೆ ನೇರ ನೇಮಕಾತಿಯಿಂದ ತುಂಬುವವರೆಗೆ/ ವರ್ಗಾವಣೆಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ಚಾಲ್ತಿ ನಿಯಮದ ಪ್ರಕಾರ ಹಾಗೂ ರೋಸ್ಟರ್ ಪದ್ಧತಿಯನ್ನು ಅಳವಡಿಸಿಕೊಂಡು ನೇಮಕಾತಿ ಮಾಡಲಾಗಿದೆ.

| ಕ್ರ.ಸಂ. | ದಂತ ವೈದ್ಯರ ಹೆಸರು | ವರ್ಗ | ನೇಮಕಾತಿ ಸ್ಥಳ |
|---|---|---|---|
| 1 | ಡಾ: ವಿವೇಕ್ ಜನಾರ್ಧನ್ ಗಿಡ್ಡಾನಿ ಎಂ.ಡಿ. ಬ್ಲಾಕ್, ಸೋಮವಾರಪೇಟೆ | ಸಾಮಾನ್ಯ | ಸಾರ್ವಜನಿಕ ಆಸ್ಪತ್ರೆ, ಸೋಮವಾರಪೇಟೆ |

**ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.**

1. ನೇಮಕಾತಿಗೊಂಡ ಅಭ್ಯರ್ಥಿ ನೇಮಕ ಮಾಡಿದ ಸ್ಥಳದಲ್ಲಿ ಈ ಅಧಿಕೃತ ಜ್ಞಾಪನ ತಲುಪಿದ ದಿನಾಂಕದಿಂದ 15 ದಿನಗಳೊಳಗಾಗಿ ಕರ್ತವ್ಯದ ಮೇರೆ ಹಾಜರಾಗತಕ್ಕದ್ದು. ತಪ್ಪಿದಲ್ಲಿ ನೇಮಕಾತಿ ಆದೇಶವು ತಂತಾನೆ ರದ್ದಾಗುತ್ತದೆ. ನಿಗದಿತ ದಿನಾಂಕದ ನಂತರ ಯಾವುದೇ ಅಭ್ಯರ್ಥಿಯನ್ನು ಕರ್ತವ್ಯಕ್ಕೆ ಹಾಜರುಪಡಿಸಿಕೊಂಡಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಯನ್ನು ಹೊಣೆಗಾರನನ್ನಾಗಿ ಮಾಡಲಾಗುವುದು.
2. ಶಸ್ತ್ರ ಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಸೋಮವಾರಪೇಟೆ ಇವರು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಅಭ್ಯರ್ಥಿಯ ಜನನ ಪ್ರಮಾಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಕ್ರಮವಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ.
3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರ್ಕಾರದ ಆದೇಶದಲ್ಲಿ ಹೇಳಿರುವ ನಿಬಂಧನೆ ಹಾಗೂ ಷರತ್ತಿಗೊಳಪಟ್ಟು ಒಪ್ಪಿಕೊಂಡಿರುವ ರೂ.50/-ರ ಛಾಪಾ ಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಈ ಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾದ ವೈದ್ಯರು ಆರೋಗ್ಯ ಇಲಾಖೆಯಿಂದ ನಿಗಧಿಪಡಿಸಿದ ವೈದ್ಯಾಧಿಕಾರಿಗಳ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಬದ್ಧರಿರತಕ್ಕದ್ದು.
5. ಕೇಂದ್ರಸ್ಥಾನದಲ್ಲಿ ವಾಸವಿರುವುದಾಗಿ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಜಿಲ್ಲಾಧಿಕಾರಿ,

ಪಿ.ಆರ್.853 ಕೊಡಗು ಜಿಲ್ಲೆ, ಮಡಿಕೇರಿ.

## ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ, ಬೆಂಗಳೂರು

## ಅಧಿಸೂಚನೆ

### ಸಂಖ್ಯೆ: ಅಪಜಿ 18 ಎಫ್‌ಎಎಫ್ 2004 ಬೆಂಗಳೂರು ದಿನಾಂಕ: 8ನೇ ಏಪ್ರಿಲ್ 2005

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964ನೇ ಕರ್ನಾಟಕ ಅಧಿನಿಯಮ 5ರ ಕಲಂ) 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಸರ್ಕಾರಿ ಅಧಿಸೂಚನೆಯ ಕ್ರಮಾಂಕ: ಎಫ್‌ಎಫ್‌ಡಿ 178 ಎಫ್‌ಎಎಫ್ 80 ದಿನಾಂಕ: 17.12.81 ಪ್ರಕಾರ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳನ್ನು 08.04.2005 ದಿನಾಂಕದಿಂದ ಅನುಸೂಚಿಯ ಕೊನೆಯ ಭಾಗದಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು ಮೀಸಲು ಅರಣ್ಯವೆಂದು ಕರ್ನಾಟಕ ಸರ್ಕಾರವು ಕಾದಿರಿಸಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

## ಅನುಸೂಚಿ

ಜಿಲ್ಲೆಯ ಹೆಸರು : ಶಿವಮೊಗ್ಗ

ತಾಲ್ಲೂಕಿನ ಹೆಸರು : ಹೊಸನಗರ

ಹೋಬಳಿಯ ಹೆಸರು : ಹುಂಚ

ಗ್ರಾಮದ ಹೆಸರು : ಜಂಬಳ್ಳಿ

ಜಮೀನಿನ ಸರ್ವೆ ನಂಬರ್ : 10,4,54 ಮತ್ತು 55

ಒಟ್ಟು ವಿಸ್ತೀರ್ಣ : 274.20 ಎಕರೆಗಳು ಅಥವಾ 110-90 ಹೆಕ್ಟೇರ್

ಬ್ಲಾಕಿನ ಹೆಸರು : ಜಂಬಳ್ಳಿ ಮೀಸಲು ಅರಣ್ಯ ಬ್ಲಾಕ್ 1 ಮತ್ತು 11

## ಗಡಿ ವಿವರಣೆ

ಜಂಬಳ್ಳಿ ಮೀಸಲು ಅರಣ್ಯ ಬ್ಲಾಕ್ 1 ಸರ್ವೆ ನಂಬರ್ 4,54 ಮತ್ತು 55 ವಿಸ್ತೀರ್ಣ 148 ಎಕರೆಗಳು

ಸರ್ವೆ ನಂ.50ರ ವಾಯುವ್ಯ ಮೂಲೆಯಲ್ಲಿ ರೇಖೆಯ ಸ್ಥಾನಸಂಖ್ಯೆ 1 ಸರ್ವೆ ನಂಬರ್ 54ರ ಮತ್ತು ಕಲೆಕೊಪ್ಪ ಗ್ರಾಮದ ಗಡಿಗಳು ಸಂದಿಸುವಲ್ಲಿರುವ ಕೂಡುಬಾಂದುವಿನಲ್ಲಿ ಇರುತ್ತದೆ. ರೇಖೆಯು ಸ್ಥಾನಸಂಖ್ಯೆ 1 ರಿಂದ 2ಕ್ಕೆ ವಾಯವ್ಯ ದಿಕ್ಕಿನ ಕಡೆಗೆ ಕಲೆಕೊಪ್ಪ ಗಡಿರೇಖೆಯ ಮೇಲೆ 36.50 ಸರಪಳಿ ದೂರ ಚಲಿಸಿ ಮತ್ತು ಅದು ದೊಡ್ಡ ಕೊಳವಳ್ಳಿ ಗ್ರಾಮದ ಕೂಡುಬಾಂದುವನ್ನು ಮುಟ್ಟುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 2 ರಿಂದ 3ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ ದೊಡ್ಡ ಕೊಳವಳ್ಳಿ ಗಡಿಯ 24 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 3 ರಿಂದ 4ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ ದೊಡ್ಡ ಕೊಳವಳ್ಳಿ ಗಡಿಯ ಮೇಲೆ 12 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 4 ರಿಂದ 5ಕ್ಕೆ ಪೂರ್ವ ಮತ್ತು ಈಶಾನ್ಯ ದಿಕ್ಕುಗಳ ನಡುವೆ 23.75 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 5 ರಿಂದ 6ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ ದೊಡ್ಡ ಕೊಳವಳ್ಳಿ ಗಡಿಯ ಮೇಲೆ 34.50 ಸರಪಳಿ ದೂರ ಚಲಿಸುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಮತ್ತು ಬೇರಿಂಗ್ಸ್ ಈ ಕೆಳಗಿನಂತಿದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 1 | 2 | 48.30 | 36.50 |
| 2 | 3 | 135.00 | 24.00 |
| 3 | 4 | 143.00 | 12.00 |
| 4 | 5 | 79.30 | 23.75 |
| 5 | 6 | 140.20 | 34.50 |

**ಪೂರ್ವ:-** ರೇಖೆಯು ಸರ್ವೆ ನಂಬರು 4 ರಲ್ಲಿ ಸ್ಥಾನಸಂಖ್ಯೆ 6 ರಿಂದ 7 ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳ ನಡುವೆ 23.00 ಬೇರಿಂಗ್‌ನಲ್ಲಿ 4 ಸರಪಳಿ ದೂರ ಚಲಿಸುತ್ತದೆ.

**ದಕ್ಷಿಣ:-** ರೇಖೆಯು ಸ್ಥಾನಸಂಖ್ಯೆ 7 ರಿಂದ 8ಕ್ಕೆ ಪಶ್ಚಿಮಾಭಿಮುಖವಾಗಿ 8.75 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 8 ರಿಂದ 9ಕ್ಕೆ ವಾಯುವ್ಯ ದಿಕ್ಕಿನ ಕಡಗೆ 19.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 9 ರಿಂದ 10ಕ್ಕೆ ನೈರುತ್ಯ ದಿಕ್ಕಿನ ಕಡೆಗೆ 5 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 10 ರಿಂದ 11ಕ್ಕೆ ಉತ್ತರಾಭಿಮುಖವಾಗಿ 5.00 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 11 ರಿಂದ 12ಕ್ಕೆ ಪಶ್ಚಿಮಾಭಿಮುಖವಾಗಿ 7.00 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳ ನಡುವೆ ಸ್ಥಾನಸಂಖ್ಯೆ 12 ರಿಂದ 13ಕ್ಕೆ 13 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 14 ರಿಂದ 15ಕ್ಕೆ ವಾಯುವ್ಯ ದಿಕ್ಕಿನ ಕಡೆಗೆ 22.50 ಸರಪಳಿ ದೂರ ಚಲಿಸುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ಸ್ ಮತ್ತು ದೂರ ಈ ಕೆಳಕಂಡಂತಿದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 7 | 8 | 269.00 | 8.75 |
| 8 | 9 | 303.30 | 19.50 |
| 9 | 10 | 252.00 | 5.00 |
| 10 | 11 | 11.00 | 5.00 |
| 11 | 12 | 290.00 | 7.00 |
| 12 | 13 | 201.00 | 13.00 |
| 13 | 14 | 177.00 | 6.75 |
| 14 | 15 | 299.30 | 22.50 |

**ಪಶ್ಚಿಮ:-** ರೇಖೆಯು ಸ್ಥಾನಸಂಖ್ಯೆ 15 ರಿಂದ 16ಕ್ಕೆ ಉತ್ತರಾಭಿಮುಖವಾಗಿ 13 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 16 ರಿಂದ 17ಕ್ಕೆ ಪಶ್ಚಿಮಾಭಿಮುಖವಾಗಿ 5 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 17 ರಿಂದ 18ಕ್ಕೆ ನೈರುತ್ಯ ದಿಕ್ಕಿನ ಕಡೆಗೆ 8 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 18 ರಿಂದ 19ಕ್ಕೆ ವಾಯುವ್ಯ ದಿಕ್ಕಿನ ಕಡೆಗೆ 11.75 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 19 ರಿಂದ 20ಕ್ಕೆ ಈಶಾನ್ಯ ದಿಕ್ಕಿನ ಕಡೆಗೆ 19.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 20 ರಿಂದ 21ಕ್ಕೆ ವಾಯುವ್ಯ ದಿಕ್ಕಿನ ಕಡೆಗೆ 9 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 21 ರಿಂದ 1ಕ್ಕೆ ನೈರುತ್ಯ ದಿಕ್ಕಿನ ಕಡೆಗೆ 29.50 ಸರಪಳಿ ದೂರ ಚಲಿಸಿ ಮತ್ತು ಅದು ಪ್ರಾರಂಭದ ಬಿಂದುವಾದ ಸ್ಥಾನಸಂಖ್ಯೆ 1ನ್ನು ಮುಟ್ಟುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ಸ್ ಮತ್ತು ದೂರ ಈ ಕೆಳಕಂಡಂತಿದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 15 | 16 | 19.00 | 13.00 |
| 16 | 17 | 286.00 | 5.00 |
| 17 | 18 | 206.00 | 8.00 |
| 18 | 19 | 303.00 | 11.75 |
| 19 | 20 | 43.30 | 19.50 |
| 20 | 21 | 302.00 | 9.00 |
| 21 | 1 | 240.00 | 29.50 |

**ಬ್ಲಾಕ್-11 ಸರ್ವೆ ನಂಬರ್ 10**

**ವಿಸ್ತೀರ್ಣ:- 126.20 ಎಕರೆಗಳು**

**ಉತ್ತರ:-** ಪ್ರಾರಂಭದ ಸ್ಥಾನಸಂಖ್ಯೆ ಸರ್ವೆನಂಬರ್ 11ರ ವಾಯುವ್ಯ ಮೂಲೆಬಾಂದುವಿನಲ್ಲಿ ಸರ್ವೆ ನಂಬರ್ 10ರ ಕೂಡಬಾರದು ಮತ್ತು ಮೂಗಡತಿ ಗ್ರಾಮದ ಗಡಿಯ ಮೇಲೆ ಇರುವ ಬಾಂದುವಿನಲ್ಲಿ ಸ್ಥಿರವಾಗಿದೆ ರೇಖೆಯು ಸ್ಥಾನಸಂಖ್ಯೆ 1 ರಿಂದ 2ಕ್ಕೆ ಪೂರ್ವ ಮತ್ತು ಆಗ್ನೇಯ ದಿಕ್ಕುಗಳ ನಡುವೆ 20 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 2 ರಿಂದ 3ಕ್ಕೆ ಈಶಾನ್ಯ ದಿಕ್ಕಿನ ಕಡೆಗೆ 3.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 3 ರಿಂದ 4ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ 20 ಸರಪಳಿ ದೂರ ಚಲಿಸುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಬೇರಿಂಗ್ಸ್ ಈ ಕೆಳಕಂಡಂತಿದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 1 | 2 | 114.00 | 20.00 |
| 2 | 3 | 52.30 | 3.50 |
| 3 | 4 | 144.00 | 20.00 |

**ಪೂರ್ವ:-** ರೇಖೆಯು ಸ್ಥಾನಸಂಖ್ಯೆ 4 ರಿಂದ 5ಕ್ಕೆ ದಕ್ಷಿಣ ಮತ್ತು ಆಗ್ನೇಯ ದಿಕ್ಕುಗಳ ನಡುವೆ 205.30 ಬೇರಿಂಗ್ಸ್‌ನಲ್ಲಿ ಸಾಗರ-ಹುಂಚ ರಸ್ತೆಯ ಮೇಲೆ 26 ಸರಪಳಿ ದೂರ ಚಲಿಸಿ ಮತ್ತು ಅದು ಹುಲಿಗದ್ದೆ ಗ್ರಾಮದ ಗಡಿರೇಖೆಯನ್ನು ಮುಟ್ಟುತ್ತದೆ.

**ದಕ್ಷಿಣ:-** ರೇಖೆಯು ಸ್ಥಾನಸಂಖ್ಯೆ 5 ರಿಂದ 6ಕ್ಕೆ ಹುಲಿಗೆದ್ದು ಗಡಿರೇಖೆಯ ಮೇಲೆ ಪಶ್ಚಿಮಾಭಿಮುಖವಾಗಿ 14.25 ಸರಪಳಿ ದೂರ ಸಾಗುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 6 ರಿಂದ 8ಕ್ಕೆ ಸ್ಥಾನಸಂಖ್ಯೆ 7ರ ಮುಖಾಂತರ ವಾಯುವ್ಯಾಭಿಮುಖವಾಗಿ 28.30 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 8 ರಿಂದ 9ಕ್ಕೆ ವಾಯುವ್ಯಾಭಿಮುಖವಾಗಿ 11.75 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 9 ರಿಂದ 11ಕ್ಕೆ ಸ್ಥಾನಸಂಖ್ಯೆ 10ರ ಮೂಲಕ ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳ ನಡುವೆ 13.00 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 11 ರಿಂದ 12ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ 4 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 12 ರಿಂದ 13ಕ್ಕೆ ನೈರುತ್ಯ ದಿಕ್ಕಿನ ಕಡೆಗೆ 12.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 13 ರಿಂದ 14ಕ್ಕೆ ಹುಲಿಗೆದ್ದೆ ಗಡಿರೇಖೆಯ ಮೇಲೆ ಪಶ್ಚಿಮಾಭಿಮುಖವಾಗಿ 22.50 ದೂರ ಚಲಿಸುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ಸ್ ಮತ್ತು ದೂರ ಈ ಕೆಳಗಿನಂತಿರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 5 | 6 | 283.00 | 14.25 |
| 6 | 7 | 39.00 | 15.80 |
| 7 | 8 | 30.00 | 12.50 |
| 8 | 9 | 300.00 | 11.75 |
| 9 | 10 | 234.00 | 5.00 |
| 10 | 11 | 205.00 | 8.00 |
| 11 | 12 | 155.00 | 4.00 |
| 12 | 13 | 207.00 | 12.50 |
| 13 | 14 | 266.30 | 22.50 |

**ಪಶ್ಚಿಮ:-** ರೇಖೆಯು 14 ರಿಂದ 15ಕ್ಕೆ ಉತ್ತರಾಭಿಮುಖವಾಗಿ 3 ಸರಪಳಿ ದೂರ ಚಲಿಸಿ ಮತ್ತು ಅದು ಸರ್ವೆ ನಂಬರು 16ರ ನೈರುತ್ಯ ದಿಕ್ಕಿನ ಬಾಂದನ್ನು ಮುಟ್ಟುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 15 ರಿಂದ 16ಕ್ಕೆ ಪೂರ್ವಾಭಿಮುಖವಾಗಿ 16.25 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 16 ರಿಂದ 17ಕ್ಕೆ ಉತ್ತರಾಭಿಮುಖವಾಗಿ 16.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 17 ರಿಂದ 18ಕ್ಕೆ ಪಶ್ಚಿಮಾಭಿಮುಖವಾಗಿ 2.80 ಸರಪಳಿ ದೂರ ಚಲಿಸುತ್ತದೆ. ರೇಖೆಯು ಸ್ಥಾನಸಂಖ್ಯೆ 18 ರಿಂದ 19ಕ್ಕೆ ಉತ್ತರಾಭಿಮುಖವಾಗಿ 2.50 ಚಲಿಸುತ್ತದೆ. ಪುನಃ ರೇಖೆಯ ಸ್ಥಾನಸಂಖ್ಯೆ 19 ರಿಂದ 20ಕ್ಕೆ ಪಶ್ಚಿಮ ಮತ್ತು ವಾಯುವ್ಯ ದಿಕ್ಕುಗಳ ನಡುವೆ 5 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 20 ರಿಂದ 21ಕ್ಕೆ ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳ ನಡುವೆ 2.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 21 ರಿಂದ 22ಕ್ಕೆ ಪಶ್ಚಿಮಾಭಿಮುಖವಾಗಿ 6 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಮುಂದುವರೆದು ಸ್ಥಾನಸಂಖ್ಯೆ 22 ರಿಂದ 21ಕ್ಕೆ ಪಶ್ಚಿಮ ಮತ್ತು ನೈರುತ್ಯ ದಿಕ್ಕುಗಳ ನಡುವೆ 18 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 23 ರಿಂದ 24ಕ್ಕೆ ವಾಯುವ್ಯ ದಿಕ್ಕಿನ ಕಡೆಗೆ 12 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 24 ರಿಂದ 25ಕ್ಕೆ ಪೂರ್ವ ಮತ್ತು ಈಶಾನ್ಯ ದಿಕ್ಕುಗಳ ನಡುವೆ 4.75 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 25 ರಿಂದ 26ಕ್ಕೆ ಪೂರ್ವಾಭಿಮುಖವಾಗಿ 33 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಮುಂದುವರೆದು ಸ್ಥಾನಸಂಖ್ಯೆ 26

ರಿಂದ 27ಕ್ಕೆ ದಕ್ಷಿಣ ಮತ್ತು ಆಗ್ನೇಯ ದಿಕ್ಕುಗಳ ನಡುವೆ 3.60 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 27 ರಿಂದ 28ಕ್ಕೆ ಈಶಾನ್ಯಾ ದಿಕ್ಕಿನ ಕಡೆಗೆ 5 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ವಾಯುವ್ಯ ದಿಕ್ಕಿನ ಕಡೆಗೆ ಸ್ಥಾನಸಂಖ್ಯೆ 28 ರಿಂದ 7 ಸರಪಳಿ ದೂರ ಚಲಿಸಿ ಮತ್ತು ಅದು ಪ್ರಾರಂಭದ ಸ್ಥಾನಸಂಖ್ಯೆ 1ನ್ನು ಮುಟ್ಟುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ಸ್ ಮತ್ತು ದೂರ ಈ ಕೆಳಕಂಡಂತೆ ಇದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಬೇರಿಂಗ್ಸ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 14 | 15 | 356.00 | 3.00 |
| 15 | 16 | 85.00 | 16.25 |
| 16 | 17 | 11.30 | 16.50 |
| 17 | 18 | 297.30 | 2.80 |
| 18 | 19 | 22.00 | 2.50 |
| 19 | 20 | 294.00 | 5.00 |
| 20 | 21 | 204.30 | 2.50 |
| 21 | 22 | 297.30 | 6.00 |
| 22 | 23 | 257.30 | 18.00 |
| 23 | 24 | 312.00 | 12.00 |
| 24 | 25 | 61.00 | 4.75 |
| 25 | 26 | 82.00 | 33.00 |
| 26 | 27 | 151.00 | 8.60 |
| 27 | 28 | 33.00 | 5.00 |
| 28 | 1 | 324.00 | 7.00 |

**ದಾರಿಯ ಹಕ್ಕುಗಳು**

1) ಸಾಗರದಿಂದ ಹುಂಚ ಹೊಸನಗರ ರಸ್ತೆಗೆ ಸ.ನಂ.4.10 ರಲ್ಲಿ ಹಾದು ಹೋಗುತ್ತದೆ.
2) ಮುಖ್ಯ ರಸ್ತೆಯಿಂದ ಸರ್ವೆನಂಬರು 10ರಲ್ಲಿ ಕೊರಲೂಕೊಪ್ಪ ರಸ್ತೆಗೆ ಹಾದು ಹೋಗುವ ದಾರಿ
3) ಕುಡವಳ್ಳಿಯಿಂದ ಕೆರಗೋಡು ರಸ್ತೆಗೆ ಸರ್ವೆನಂಬರು 55 ರಲ್ಲಿ ಹಾದುಹೋಗುವ ರಸ್ತೆ.

**ಇತರೆ ಸವಲತ್ತುಗಳು**

1) ಉಚಿತವಾಗಿ ಗ್ರಾಮಸ್ಥರು ತಮ್ಮ ಜಾನುವಾರುಗಳಿಗೆ ಹುಲ್ಲು ಮೇಯಿಸಬಹುದಾಗಿದೆ.
2) ಉಚಿತವಾಗಿ ಗ್ರಾಮಸ್ಥರು ಹಸಿರು ಎಲೆ ಗೊಬ್ಬರವನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.
3) ಉಚಿತವಾಗಿ ಗ್ರಾಮಸ್ಥರು ಒಣ ಉರುವಲು ಸೌದೆಗಳನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳದಾಗಿದೆ.
4) ಉಚಿತವಾಗಿ ಗ್ರಾಮಸ್ಥರು ಮುಳಿಹುಲ್ಲುನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.855

**ಕೆ. ವಿ. ಜಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೊಡಗು ಜಿಲ್ಲೆ, ಮಡಿಕೇರಿ

## ಅಧಿಕೃತ ಜ್ಞಾಪನಾ ಪತ್ರ

## ಸಂಖ್ಯೆ: ಇಎಸ್‌ಟಿ(2):6:2005-06 ದಿನಾಂಕ: 30ನೇ ಮೇ 2005

**ವಿಷಯ :** ಜಿಲ್ಲಾ ಆಸ್ಪತ್ರೆ ಮಡಿಕೇರಿಯಲ್ಲಿ ಖಾಲಿ ಇರುವ ತಜ್ಞ ವೈದ್ಯರ ಹುದ್ದೆಯನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧೀನ ಕಾರ್ಯದರ್ಶಿ ಆರೋಗ್ಯ ಮತ್ತು ಕುಕ ಇಲಾಖೆ ಬೆಂಗಳೂರು ಇವರ ಪತ್ರ ಸಂ: ಆಕುಕ:ಹೆಚ್‌ಎಸ್‌ಹೆಚ್ 2004 ದಿನಾಂಕ: 9.2.2005.
2. ಈ ಕಛೇರಿ ಪತ್ರಿಕಾ ಪ್ರಕಟಣೆ ಸಂ: ಇಎಸ್‌ಟಿ(2): 6: 2005-06 ದಿನಾಂಕ: 25.04.05.

ಉಲ್ಲೇಖ-1ರ ಆದೇಶದ ಪ್ರಕಾರ ಜಿಲ್ಲಾ ಆಸ್ಪತ್ರೆ ಮಡಿಕೇರಿಯಲ್ಲಿ ಖಾಲಿ ಇರುವ ಸ್ತ್ರೀ ರೋಗ ತಜ್ಞರ ಹುದ್ದೆಗೆ ಈ ಕೆಳಗೆ ನಮೂದಿಸಿದ ತಜ್ಞ ವೈದ್ಯರನ್ನು ಒಂದು ವರ್ಷದ ಅವಧಿಗೆ ಮುಂದಿನ ಆದೇಶದವರೆಗೆ ನೇರನೇಮಕಾತಿಯಿಂದ ತುಂಬುವವರೆಗೆ: ವರ್ಗಾವಣೆಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ಮಾಸಿಕ ರೂ.13000 (ರೂಪಾಯಿ ಹದಿಮೂರು ಸಾವಿರ ಮಾತ್ರ) ದಂತೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ಸರ್ಕಾರದ ಚಾಲ್ತಿ ನಿಯಮದ ಪ್ರಕಾರ ಹಾಗೂ ರೋಸ್ಟರ್ ಪದ್ಧತಿಯನ್ನು ಅಳವಡಿಸಿಕೊಂಡು ನೇಮಕಾತಿ ಮಾಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1) | ಡಾ. ಟಿ. ಶಾಂತಲ<br>ವೈದ್ಯಾಧಿಕಾರಿ ವಸತಿಗೃಹ ನಂ.6 ಜಿಲ್ಲಾ ಆಸ್ಪತ್ರೆ ಮಡಿಕೇರಿ | ಸಾಮಾನ್ಯ ವರ್ಗ |

1. ಮೇಲೆ ನಮೂದಿಸಿದ ವೈದ್ಯರು ಜಿಲ್ಲಾ ಶಸ್ತ್ರಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಮಡಿಕೇರಿ ಇವರಲ್ಲಿ ಈ ಕೂಡಲೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.
2. ಜಿಲ್ಲಾ ಶಸ್ತ್ರ ಚಿಕಿತ್ಸಕರು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಜಾತಿಪ್ರಮಾಣ ಪತ್ರ ಜನನ ದೃಢೀಕರಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಕ್ರಮವಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ.

3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರಕಾರದ ಆದೇಶದಲ್ಲಿ ಹೇಳಿರುವ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಒಪ್ಪಿಕೊಂಡಿರುವ ರೂ.50ರ ಛಾಪಾಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಈ ಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾದ ವೈದ್ಯರುಗಳು ಆರೋಗ್ಯ ಇಲಾಖೆಯಿಂದ ನಿಗದಿಪಡಿಸಿದ ವೈದ್ಯಾಧಿಕಾರಿಗಳ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಬದ್ಧರಿರತಕ್ಕದ್ದು
5. ಕೇಂದ್ರಸ್ಥಾನದಲ್ಲಿ ವಾಸವಿರುವುದಾಗಿ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಜಿಲ್ಲಾಧಿಕಾರಿಗಳು,

ಪಿ.ಆರ್.865 ಕೊಡಗು, ಮಡಿಕೇರಿ.

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ:ಎಸ್‌ಡಿಕೆ:46:ಡಿಟಿಸಿಆರ್: 1997-98 ದಿನಾಂಕ: 25ನೇ ಮೇ 2005**

**ಉಪಸ್ಥಿತರು :** ಎನ್. ಎಂ ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು :**

ಅಬಕಾರಿ ಉಪ ನಿರೀಕ್ಷಕರು, ವಿಟ್ಲ ಉಪವಲಯ, ವಿಟ್ಲ.

**ವಿರುದ್ಧ**

**ಆರೋಪಿಗಳು:**

1. ಎ. ವಿ. ಪುತ್ರನ್ ಶಾಸ್ತ್ರಿ, ಬಿನ್: ದಿ. ಅರುಣಾಚಲಪ್ಪ, ಗುತ್ತಪ್ಪ ಕಾಲೋನಿ, ಮೂರನೇ ತಿರುವು, ವೆಂಕಟೇಶ್ವರ ನಗರ, ಶಿವಮೊಗ್ಗ.
2. ಲಂಬಾಣಿರಾಜ, ಬಿನ್: ಬಿ. ಕೃಷ್ಣಪ್ಪ, ದಾವಣಗೆರೆ ಜಿಲ್ಲೆ,

**ಅರ್ಜಿದಾರರು:**

ಎನ್. ಕೆ. ಸೈಯದ್ ಬಾಷಾ, ಬಿನ್: ಸೈಯದ್ ಖುದ್ದುಸ್, ವಾಸ: ಸಯ್ಯದ್ ದಸತಗಿರಿ ಮಂಜಿಲ್, ಒಂದನೇ ಕ್ರಾಸ್, ಬರಮಪ್ಪನಗರ, ಶಿವಮೊಗ್ಗ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 04.08.1997 ರಂದು ಫಿರ್ಯಾದುದಾರರು ಬಂಟ್ವಾಳ ತಾಲ್ಲೂಕು ವಿಟ್ಲ ಕಸಬಾ ಗ್ರಾಮದ ಕಳಿಂಜೆಮಲೆ ರಕ್ಷಿತಾರಣ್ಯದ ವಿಟ್ಲ ಎಕ್ಕಡ ರಸ್ತೆ ಪಕ್ಕದಲ್ಲಿ ಅರಣ್ಯ ವನಪಾಲಕರು ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ಸಂಜೆ 6.30 ಗಂಟೆಗೆ ವಿಟ್ಲ ಕಡೆಯಿಂದ ಬಂದ ಲಾರಿಯನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಿದಾಗ, ಇಲಾಖಾ ಸಿಬ್ಬಂದಿಯವರು ಲಾರಿ ಚಾಲಕನನ್ನು ಪ್ರಶ್ನಿಸಿ ಲಾರಿ ಎಲ್ಲಿಂದ ಬರುತ್ತಿದೆ ಎಂದು ಕೇಳಲಾಗಿ, ಚಾಲಕನು ಲಾರಿಯು ಶಿವಮೊಗ್ಗದಿಂದ ಬರುತ್ತಿದೆ ಮತ್ತು ಲಾರಿಯಲ್ಲಿ ಒಣಹುಲ್ಲು ಇದೆ ಎಂದು ತಿಳಿಸಿದನು. ಸದರಿ ಲಾರಿಯಲ್ಲಿದ್ದ ಸರಕು ಎಲ್ಲಿಗೆ ಕೊಂಡೊಯ್ಯಲಾಗುತ್ತಿದೆ ಎಂದು ಪ್ರಶ್ನಿಸಿದಾಗ, ಅದು ಕೇರಳದ ನೀಲೇಶ್ವರಕ್ಕೆ ಹೋಗುತ್ತದೆ ಎಂದು ತಿಳಿಸಿದನು. ಅವರ ಮಾತಿನ ವರ್ತನೆಯಿಂದ ಸಂಶಯಗೊಂಡ ಅರಣ್ಯ ಪಾಲಕರು ಲಾರಿಯನ್ನು ಬದಿಗೆ ನಿಲ್ಲಿಸಿ, ಲಾರಿಯಲ್ಲಿದ್ದ ಹುಲ್ಲನ್ನು ಪೂರ್ತಿಯಾಗಿ ಖಾಲಿ ಮಾಡಿ ಮೊದಲನೇಯದಾಗಿ ನೋಡಲಾಗಿ, ಅದರಲ್ಲಿ ಕ್ಯಾನ್‌ವಾಸ್ ಚೀಲ ಇದ್ದು, ಅದರಲ್ಲಿ ಗಾಂಜಾವನ್ನು ಇಡಲಾಗಿತ್ತು. ಮತ್ತೊಂದು ರಟ್ಟಿನ ಪೆಟ್ಟಿಗೆ ಇದ್ದು, ಅದನ್ನು ತೆಗೆದು ನೋಡಲಾಗಿ ಅದರಲ್ಲಿ 180 ಮಿಲಿಯ 48 ಸೀಸೆಯಿರುವ ರಾಯಲ್ ಗೋಲ್ಡ್ ಕಪ್ ವಿಸ್ಕಿ ಇತ್ತು. ಗಾಂಜಾ ಸೊಪ್ಪನ್ನು ಮತ್ತು ಅಕ್ರಮ ಮದ್ಯವನ್ನು ಸಾಗಿಸುತ್ತಿರುವುದು ಕರ್ನಾಟಕ ಅಬಕಾರಿ ಕಾಯ್ದೆಗೆ ವಿರುದ್ಧ ಎಂದು ಹೇಳಿ ಲಾರಿಯಲ್ಲಿದ್ದ ಒಣಹುಲ್ಲನ್ನು ಲಾರಿಗೆ ಲೋಡ್ ಮಾಡಿ, ವಿಷಯವನ್ನು ಅಬಕಾರಿ ಉಪ ನಿರೀಕ್ಷಕರಿಗೆ ವರದಿ ಮಾಡಿರುತ್ತಾರೆ. ವಿಟ್ಲ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ಸದರಿ ಮೊಕದ್ದಮೆಯನ್ನು ತಮ್ಮ ಪ್ರಥಮ ಮಾಹಿತಿ ವರದಿ ಸಂಖ್ಯೆ: 2/97-98 ದಿನಾಂಕ: 5.08.97 ರಂದು ಮೊಕದ್ದಮೆ ದಾಖಲಿಸಿ, ಈ ಪ್ರಾಧಿಕಾರಕ್ಕೆ ಹಾಗೂ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ. ನಂತರ ಈ ನ್ಯಾಯಾಲಯದಿಂದ ಸಂಬಂಧಪಟ್ಟವರಿಗೆ ಕಾರಣ ಕೇಳಿ ನೋಟೀಸನ್ನು ನೀಡಲಾಗಿರುತ್ತದೆ.

ಈ ಪ್ರಾಧಿಕಾರಕ್ಕೆ ದಿನಾಂಕ: 7.10.97 ರಂದು ಸೈಯದ್ ಬಾಷಾ ಎಂಬುವವರು ಒಂದು ಅರ್ಜಿಯನ್ನು ಸಲ್ಲಿಸಿ ತಾನು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕನಾಗಿರುತ್ತೇನೆಂದು, ಮೊಕದ್ದಮೆಗೂ ತನಗೂ ಯಾವುದೇ ಸಂಬಂಧವಿರುವುದಿಲ್ಲ, ತಾನು ನಿರಪರಾಧಿ ಎಂದು, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಬಿಟ್ಟುಕೊಡಬೇಕೆಂದು ಈ ಪ್ರಾಧಿಕಾರವು ನೀಡಿದ ನೋಟೀಸಿಗೆ ಉತ್ತರವಾಗಿ ನೀಡಿರುತ್ತಾರೆ.

ನಂತರ ಈ ಪ್ರಕರಣದಲ್ಲಿ ದಿನಾಂಕ: 22.1.98 ರಂದು ಅಭಿಯೋಜನಾ ಪರವಾಗಿ ಪಿಡಬ್ಲ್ಯೂ-1 ಎಂದು ಶ್ರೀ ಎ. ಚಂದ್ರಶೇಖರ್ ಇವರ ಹೇಳಿಕೆಯನ್ನು ಪಡೆಯಲಾಗಿದೆ.

ವಾಹನದ ಮಾಲೀಕರ ಪರವಾಗಿ ದಿನಾಂಕ: 9.2.2005 ರಂದು ಶ್ರೀ ಎನ್. ಕೆ. ಸೈಯದ್ ಬಾಷಾ ಇವರು ಡಿಡಬ್ಲ್ಯೂ-1 ಎಂದು ಹೇಳಿಕೆ ನೀಡಿರುತ್ತಾರೆ. ಮೊಕದ್ದಮೆಗೆ ಸಂಬಂಧಿಸಿದ ದಾಖಲಾತಿಗಳನ್ನು ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ-1 ಎಂದು ಹಾಗೂ ಪ್ರಥಮ ಮಾಹಿತಿ ವರದಿಯ ವಾಯಾ ಪ್ರತಿಯನ್ನು ನಿಶಾನೆ ಪಿ-2 ಎಂದು ಈ ಪ್ರಕರಣದಲ್ಲಿ ಹಾಜರುಪಡಿಸಲಾಗಿದೆ. ಇದಲ್ಲದೇ ಮಹಜರನ್ನು ಕೂಡಾ ಹಾಜರುಪಡಿಸಿರುತ್ತಾರೆ.

ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಿದಾಂಶಗಳನ್ನು ಪರಿಗಣಿಸಲಾಗಿದೆ.

1. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸ್ವರಾಜ್ ಮಜ್ದಾ ಲಾರಿ ಸಂಖ್ಯೆ: ಕೆಎ-14-5002ನ್ನು ಕರ್ನಾಟಕ ಅಬಕಾರಿ ಕಾಯ್ದೆಯಡಿ ಅಪರಾಧಕ್ಕಾಗಿ ಉಪಯೋಗಿಸಲ್ಪಟ್ಟಿದೆಯೇ?
2. ವಾಹನ ಮಾಲೀಕರು ತಮ್ಮ ಗಮನಕ್ಕೆ ಬಾರದೇ ವಾಹನವು ಅಕ್ರಮ ಸಾಗಾಣಿಕೆಗೆ ಉಪಯೋಗವಾಗಿದೆಯೇ ಎಂಬುವುದನ್ನು ರುಜುವಾತು ಪಡಿಸಿದ್ದಾರೆಯೇ?
3. ಜಪ್ತುಪಡಿಸಲಾಗಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಪ್ರಕರಣದಲ್ಲಿ ಪ್ರಥಮ ಮಾಹಿತಿ ವರದಿಯಲ್ಲಿ ತಿಳಿಸಿದಂತೆ ವಾಹನವನ್ನು ಅರಣ್ಯ ಇಲಾಖೆಗೆ ಸಂಬಂಧಿಸಿದ ಸಿಬ್ಬಂದಿಯವರು ವಶಪಡಿಸಿಕೊಂಡಿದ್ದು, ಸದರಿ ವಾಹನವನ್ನು ನಂತರ ಅಬಕಾರಿ ಇಲಾಖೆಯ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುವುದು ತಿಳಿದು ಬರುತ್ತದೆ. ಸದರಿ ಅರಣ್ಯ

ಇಲಾಖೆಯ ಸಿಬ್ಬಂದಿಯವರಾದ ವನಪಾಲಕರಾಗಲಿ ಅಥವಾ ಇತರ ಸಿಬ್ಬಂದಿಯವರಾಗಲಿ ಈ ಪ್ರಾಧಿಕಾರದ ಮುಂದೆ ವಿಚಾರಣೆಗೆ ಹಾಜರಾಗಿರುವುದಿಲ್ಲ. ಸದರಿಯವರಿಗೆ ಸಾಕಷ್ಟು ಬಾರಿ ಅವಕಾಶ ನೀಡಲಾಗಿದ್ದರೂ ಸಹಾ ಹಾಜರಾಗಿರುವುದಿಲ್ಲ.

**ಪಿಡಬ್ಲ್ಯೂ-1:**

ಸಾಕ್ಷಿದಾರರಾದ ಶ್ರೀ ಎ. ಚಂದ್ರಶೇಖರ್, ವಿಟ್ಲ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ಈ ಪ್ರಕರಣದಲ್ಲಿ ಹೇಳಿಕೆ ನೀಡಿರುತ್ತಾರೆ. ಸದರಿಯವರು ತಮ್ಮ ಹೇಳಿಕೆಯಲ್ಲಿ ದಿನಾಂಕ: 10.6.94 ರಿಂದ ವಿಟ್ಲ ಉಪ ವಲಯದಲ್ಲಿ ಅಬಕಾರಿ ನಿರೀಕ್ಷಕರಾಗಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 5.8.97 ರಂದು ಮಧ್ಯಹ್ನ 3.50 ಗಂಟೆ ಸಮಯದಲ್ಲಿ ಅರಣ್ಯಾಧಿಕಾರಿಗಳು ವಶಪಡಿಸಿಕೊಂಡ ಸ್ವರಾಜ್ ಮಜ್ದಾ ಲಾರಿ ಸಂಖ್ಯೆ: ಕೆಎ-14-5002 ಮತ್ತು ಗಾಡಿಯಲ್ಲಿ ದೊರೆತ 1,300 ಚೀಲಗಳಲ್ಲಿರುವ ಒಣಹುಲ್ಲು ಮತ್ತು ಅಂದಾಜು ಒಂದು ಕೆ.ಜಿ. ಗಾಂಜಾ ಹಾಗೂ 180 ಎಂ.ಎಲ್.ನ. 48 ಸೀಸೆಗಳಿರುವ ರಾಯಲ್ ಗೋಲ್ಡ್ ಕಪ್ ವಿಸ್ಕಿ ಇವುಗಳನ್ನು ತಮ್ಮ ಕಛೇರಿ ಮುಂದೆ ಹಾಜರುಪಡಿಸಿ ಸೂಕ್ತ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆಂದು ಸಾಕ್ಷಿ ನುಡಿದಿರುತ್ತಾರೆ. ತಮ್ಮ ಹೇಳಿಕೆಯಲ್ಲಿ, ತಾವು ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತಜ್ಞರಿಗೆ ಕಳುಹಿಸಿಕೊಟ್ಟಿರುವುದಾಗಿ ಮತ್ತು ಪ್ರಥಮ ಮಾಹಿತಿ ವರದಿ ಮತ್ತು ಮಹಜರನ್ನು ದಾಖಲಿಸಿ ನ್ಯಾಯಾಲಯಕ್ಕೆ ಕಳುಹಿಸಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಸಾಕ್ಷಿದಾರರು ನೀಡಿರುವ ಹೇಳಿಕೆಯಲ್ಲಿ ಪಿಡಬ್ಲ್ಯೂ-1 ರವರ ಪ್ರತ್ಯಕ್ಷದರ್ಶಿ ಸಾಕ್ಷಿಯಲ್ಲವೆಂದು ಕಂಡು ಬರುತ್ತದೆ. ಈ ಸಾಕ್ಷಿದಾರರನ್ನು ಹೊರತುಪಡಿಸಿ ಇತರ ಸಾಕ್ಷಿಗಳು ಇರುವುದಿಲ್ಲ.

ವಾಹನದ ಮಾಲೀಕರಾದ ಶ್ರೀ ಎನ್. ಕೆ. ಬಾಷಾ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 9.2.2005 ರಂದು ಕೊಟ್ಟ ಹೇಳಿಕೆಗಳನ್ನು ನೋಡಲಾಗಿ, ಸಾಕ್ಷಿಯು ಲಾರಿಯು ಅಕ್ರಮ ಸಾಗಾಣಿಕೆಗೆ ಉಪಯೋಗಿಸಿದ ವಿಷಯ ತಿಳಿದಿರಲಿಲ್ಲ ಎಂಬುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಈ ಸಾಕ್ಷಿಯು ನ್ಯಾಯಾಲಯದಲ್ಲಿ ಸಾಕ್ಷಿ ನುಡಿಯುತ್ತಾ, ಈ ಪ್ರಕರಣದಲ್ಲಿ ವಾಹನ ಸಂಖ್ಯೆ: ಕೆಎ-14-5002ರ ನೋಂದಣಿ ಮಾಲೀಕರಾಗಿರುತ್ತಾರೆ. ತಾನು ತರಕಾರಿ ವ್ಯಾಪಾರ ಮಾಡುತ್ತೇನೆ. ಶಿವಮೊಗ್ಗದಿಂದ ಮಂಗಳೂರು ಹಾಗೂ ಉಡುಪಿ ಜಿಲ್ಲೆಗಳಿಗೆ ತರಕಾರಿಯನ್ನು ಲಾರಿಯಲ್ಲಿ ಸಾಗಾಣಿಕೆ ಮಾಡುವ ಕೆಲಸ ಮಾಡುತ್ತೇನೆ. ಲಾರಿಗೆ ಒಬ್ಬ ಡ್ರೈವರನ್ನು ನೇಮಕ ಮಾಡಿರುತ್ತೇನೆ. ಜುಲೈ-97 ರಲ್ಲಿ ತಮ್ಮ ಲಾರಿಯನ್ನು ರಿಪೇರಿ ಮಾಡಿಸಲು ಶಿವಮೊಗ್ಗ ದೇವರಾಜ ಗ್ಯಾರೇಜಿನಲ್ಲಿ ಇಟ್ಟಿರುತ್ತೇನೆ. ಅಲ್ಲಿ ಒಬ್ಬ ವಿ.ವಿ.ಪುತ್ರನ್ ಮೆಕ್ಯಾನಿಕ್ ಇವರ ಕೈಯಲ್ಲಿ ಲಾರಿಯನ್ನು ಕೊಟ್ಟಿರುತ್ತೇನೆ. ನಂತರ 15 ದಿವಸಗಳ ಬಳಿಕ ನಮಗೆ ಲಾರಿ ಸಿಗಲಿಲ್ಲ. ವಿ.ವಿ.ಪುತ್ರನ್‌ರವರಲ್ಲಿ ಹೋಗಿ ವಿಚಾರಿಸಲಾಗಿ, ಲಾರಿಯು ಬೆಂಗಳೂರಿಗೆ ಹೋಗಿರುವುದಾಗಿ ತಿಳಿಸಿರುತ್ತಾರೆ. ಬೆಂಗಳೂರಿನಲ್ಲಿ ವಾಹನದ ಬಿಡಿಭಾಗಗಳನ್ನು ತರುವುದಕ್ಕಾಗಿ ಹೋಗಿದ್ದಾರೆಂದು ತಿಳಿಸಿರುತ್ತಾರೆ. ದಿನಾಂಕ: 8.8.97 ರಂದು ನಮ್ಮ ಗಾಡಿ ಕಾಣೆಯಾಗಿದೆ ಎಂದು ವಿ. ವಿ. ಪುತ್ರನ್‌ರವರ ವಿರುದ್ಧ ಪೊಲೀಸ್ ಠಾಣೆ (ದೊಡ್ಡಪೇಟೆ) ಯಲ್ಲಿ ಕಂಪ್ಲೆಂಟ್ ಕೊಟ್ಟೆನು. ಎರಡು ದಿವಸಗಳ ನಂತರ ದಿನ ಪತ್ರಿಕೆಯಲ್ಲಿ ಸುದ್ದಿ ಬಂದಿದ್ದು, ಅಬಕಾರಿ ಇಲಾಖೆಯವರು ವಶಪಡಿಸಿಕೊಂಡಿರುತ್ತಾರೆ ಎಂಬ ವಿಷಯವು ತಿಳಿಯಿತು ಎಂದು ನುಡಿದಿರುತ್ತಾರೆ.

ಬಿ. ಮಹೇಂದ್ರನಾಥ್, ಫಾರೆಸ್ಟರ್ ಇವರಿಗೆ ವಿಚಾರಣೆಗೆ ಹಾಜರಾಗಿ ಸಾಕ್ಷಿ ಹೇಳಿಕೆ ನೀಡಲು ಈ ಪ್ರಾಧಿಕಾರದಿಂದ ಹಲವು ಬಾರಿ ವಿಚಾರಣೆ ದಿನಾಂಕಗಳನ್ನು ನಿಗದಿಪಡಿಸಿ, ಹಾಜರಾಗಲು ನೋಟೀಸುಗಳನ್ನು ನೀಡಲಾಗಿಯೂ, ಸದರಿ ಮುಖ್ಯ ಮಹಜರು ಸಾಕ್ಷಿದಾರರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ಹೇಳಿಕೆ ನೀಡಲು ವಿಫಲರಾಗಿರುವುದರಿಂದ ಫಿರ್ಯಾದುದಾರರ ಪರ ಯಾವುದೇ ಹೇಳಿಕೆ ಲಭ್ಯವಿರುವುದಿಲ್ಲ. ಅಲ್ಲದೆ, ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ಪ್ರಕರಣದ ದಾಖಲೆಗಳ ಮಾಹಿತಿಗಳಂತೆ ದಿನಾಂಕ: 4.8.1997 ರಂದು ಆರೋಪಿಗಳ ಸ್ವರಾಜ್ ಮಜ್ದಾ ಲಾರಿ ಸಂಖ್ಯೆ: ಕೆಎ-14-5002 ರಲ್ಲಿ 1300 ಕಟ್ಟು ಒಣಹುಲ್ಲು ಸಾಗಿಸಿರುವ ಸಂದರ್ಭದಲ್ಲಿ, ಸದರಿ ವಾಹನದಲ್ಲಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ. 48 ಸೀಸೆ ಮದ್ಯ ಹಾಗೂ ಅಂದಾಜು ಒಂದು ಕೆ.ಜಿ. ಗಾಂಜಾವನ್ನು ಸಾಗಿಸುತ್ತಿದ್ದರು ಎಂದು ಸಾಬೀತುಪಡಿಸಲು ಫಿರ್ಯಾದುದಾರರು ವಿಫಲರಾಗಿದ್ದು, ವಾಹನದ ಮಾಲೀಕರು ನೀಡಿರುವ ಡಿಡಬ್ಲ್ಯೂ-1ರ ಹೇಳಿಕೆಯಿಂದ, ಅವರು ಈ ಪ್ರಕರಣದಲ್ಲಿ ತನ್ನ ವಾಹನವನ್ನು ತನ್ನ ತಿಳುವಳಿಕೆಯಿಂದ ನೀಡಿರುವುದಿಲ್ಲ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ. ಹಾಗೂ ಕೇವಲ ಒಂದು ಪೆಟ್ಟಿಗೆ ಮದ್ಯವನ್ನು ಸಾಗಿಸಲು ಒಂದು ಲಾರಿಯನ್ನು ಉಪಯೋಗಿಸಿರುವ ಸಂದರ್ಭಗಳು ಈ ಪ್ರಾಧಿಕಾರದ ವಿಚಾರಣೆಗಳಲ್ಲಿ ತಿಳಿಯದಿರುವ ಅಂಶವಾಗಿರುತ್ತದೆ.

ಪ್ರಕರಣದ ಮುಖ್ಯ ಸಾಕ್ಷಿದಾರರಾದ ಅರಣ್ಯ ಇಲಾಖಾ ಸಿಬ್ಬಂದಿಗಳಿಲ್ಲದೆ, ಈ ಕಾರಣದಿಂದ ಈ ಪ್ರಕರಣದ ಆರೋಪಗಳು ಸಿದ್ದಗೊಂಡಿರುವು ದೆಂದು ಅಭಿಪ್ರಾಯ ವ್ಯಕ್ತಪಡಿಸಬಹುದಾಗಿದೆ. ವಶಪಡಿಸಿಕೊಂಡ ವಾಹನದ ಮಾಲೀಕರು ಕೊಟ್ಟ ಹೇಳಿಕೆಯಲ್ಲಿ ಮತ್ತು ಅಭಿಯೋಜನಾ ಪರವಾಗಿ ತೃಪ್ತಿಕರವಾದ ಸಾಕ್ಷ್ಯಾಧಾರಗಳು ಇಲ್ಲದೇ ಇರುವುದರಿಂದ ಒಂದನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ತಾವು ಈ ಪ್ರಕರಣದ ಮಾಲೀಕರೆಂದು ರುಜುವಾತುಪಡಿಸಲು ವಾಹನಕ್ಕೆ ಸಂಬಂಧಿಸಿದ ನೋಂದಣಿ ಪುಸ್ತಕ ಹಾಜರುಪಡಿಸಿದ್ದು, ಇದಲ್ಲದೇ ಮಾನ್ಯ ನ್ಯಾಯಾಲಯದ ಆದೇಶದಂತೆ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ವಾಹನದ ಮಾಲೀಕರಿಗೆ ಕೊಡಲಾಗಿದೆ. ಈ ಎಲ್ಲಾ ಕಾರಣಗಳಿಂದ ಎರಡನೇ ವಿವಾದಾಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ.

ಪ್ರಕರಣದ ಮೇಲಿನ ವಿಚಾರಣಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಪ್ರಕರಣದ ಮುಟ್ಟುಗೋಲು ನಡವಳಿಗಳನ್ನು ಕೈಬಿಟ್ಟು ವಾಹನವನ್ನು ವಾಹನದ ಆರ್.ಸಿ. ಮಾಲೀಕರಿಗೆ ಬಿಟ್ಟುಕೊಡುವಂತೆ ತೀರ್ಮಾನಕ್ಕೆ ಬಂದು ಸೂಕ್ತ ಅಭಿಪ್ರಾಯಪಟ್ಟು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್. ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ವಿಟ್ಲ ಉಪವಲಯ, ವಿಟ್ಲ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 2/97-98 ದಿನಾಂಕ:4/5.8.97ರಲ್ಲಿ ಜಪ್ತುಪಡಿಸಿಕೊಂಡಿರುವ ವಾಹನ ಸ್ವರಾಜ್ ಮಜ್ದಾ ಲಾರಿ ಸಂಖ್ಯೆ: ಕೆಎ-14-5002ನ್ನು ನಿಯಮ 43 (ಎ)2 ರನ್ವಯ ಈ ಪ್ರಾಧಿಕಾರ ದಿನಾಂಕ: 10.2.98ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ, ಸದರಿ ವಾಹನವನ್ನು ಆರ್.ಸಿ. ಮಾಲೀಕರಾದ ಎನ್. ಕೆ. ಸೈಯದ್ ಬಾಷಾ ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆಗೊಳಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 25.5.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್. ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ, ಅಬಕಾರಿ ಅಧೀಕ್ಷಕರು,
ದ. ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ: 1 - ಶ್ರೀ ಎ. ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ವಿಟ್ಲ ಉಪ ವಲಯ, ವಿಟ್ಲ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 : ರಾಸಾಯನಿಕ ವಿಶ್ಲೇಷಕರ ವರದಿಯ ವಾಯಾ ಪ್ರತಿ

ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿಯ ವಾಯಾ ಪ್ರತಿ

ನಿಶಾನೆ ಪಿ-2(ಎ) : ದೃಢೀಕರಿಸಿದ ಸಹಿ.

**ಅನುಬಂಧ-3**

**ವಾಹನದಲ್ಲಿದ್ದ ಇತರೆ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿಡಬ್ಲ್ಯೂ-1 : ಆರ್.ಸಿ. ಮಾಲೀಕರ ಹೇಳಿಕೆ.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

............ಯಾವುದೂ ಇರುವುದಿಲ್ಲ ...............

**ಎನ್. ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ, ಅಬಕಾರಿ ಅಧೀಕ್ಷಕರು,
ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್.866

## ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂದಕರ ಕಛೇರಿ, ಬೆಂಗಳೂರು-52, ಇವರ ನಡವಳಿಕೆಗಳು

**ವಿಷಯ :** ಮೈಕೋ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಸಮಾಪನಾಧಿಕಾರಿಗಳ ಬದಲಾವಣೆ ಕುರಿತು.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಆರ್‌ಸಿಎಸ್: ಎಲ್‌ಕ್ಯೂಡಿ: 47: 2001-02 ದಿನಾಂಕ: 26.12.01.

2. ಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾ: ಇವರ ಪತ್ರ ಸಂ. ಸ.ಅ.ಅ. (ಉ) 04.2005-06, ದಿನಾಂಕ: 23.04.2005.

**ಪ್ರಸ್ತಾವನೆ:**

ಮೈಕೋ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದರ ಸಮಾಪನಾಧಿಕಾರಿಗಳಾಗಿ ಉಲ್ಲೇಖ(1)ರ ಆದೇಶದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾ: ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರುರವರ ಕಛೇರಿ, ಇವರನ್ನು ನೇಮಕ ಮಾಡಲಾಗಿತ್ತು. ಉಲ್ಲೇಖ (2)ರಲ್ಲಿ ಸಮಾಪನಾಧಿಕಾರಿಗಳು ತಿಳಿಸಿರುವಂತೆ ಸದರಿಯವರಿಗೆ ಬೆಂಗಳೂರು ದಕ್ಷಿಣ ತಾಲ್ಲೂಕಿನ ಸಹಕಾರ ಅಭಿವೃದ್ಧಿ ಅಧಿಕಾರಿ, ಹುದ್ದೆಯಿಂದ ಬೆಂಗಳೂರು ಉತ್ತರ ತಾಲ್ಲೂಕು ಸಹಕಾರ ಅಭಿವೃದ್ಧಿ ಅಧಿಕಾರಿ, ಹುದ್ದೆಗೆ ವರ್ಗಾವಣೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಆರ್‌ಸಿಎಸ್: ಎಲ್‌ಕ್ಯೂಡಿ: 47:2001-02 ದಿನಾಂಕ: 10ನೇ ಜೂನ್ 2005**

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಹಾಲಿ ಕಾರ್ಯನಿರ್ವಹಿಸುತ್ತಿದ್ದ ಸಮಾಪನಾಧಿಕಾರಿಗಳು ವರ್ಗಾವಣೆಗೊಂಡಿರುವುದರಿಂದ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು ಹಿಂದಿನ ಆದೇಶ ಸಂಖ್ಯೆ: ಆರ್‌ಸಿಎಸ್: ಎಲ್‌ಕ್ಯೂಡಿ. 47:2001-02, ದಿನಾಂಕ: 26.12.2001ನ್ನು ಮಾರ್ಪಡಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾ: ಇವರನ್ನು ಮೈಕೋ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮೊಹರ್‌ನೊಂದಿಗೆ ದಿನಾಂಕ: 10.06.2005 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್.867

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ-1**

**ಸಂಖ್ಯೆ: ಡಿಪಿಎಆರ್ 17 ಹೆಚ್‌ಹೆಚ್‌ಎಲ್ 2005 ಬೆಂಗಳೂರು, ದಿನಾಂಕ: 26ನೇ ಮೇ 2005**

ದಿನಾಂಕ: 2.06.2005ರ ಗುರುವಾರದಂದು 21 ಶಿವಮೊಗ್ಗ ಲೋಕಸಭಾ ಕ್ಷೇತ್ರ ಮತ್ತು 81 ಚಾಮರಾಜಪೇಟೆ ವಿಧಾನ ಸಭಾ ಕ್ಷೇತ್ರಗಳಿಗೆ ಉಪಚುನಾವಣೆ ನಡೆಯಲಿದ್ದು, ಸದರೀ ಕ್ಷೇತ್ರಗಳ ಮತದಾರರು ಮತ ಚಲಾಯಿಸಲು ಅನುಕೂಲವಾಗುವಂತೆ ಉಪ ಚುನಾವಣೆ ನಡೆಯಲಿರುವ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಬರುವಂತಹ ಎಲ್ಲಾ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಛೇರಿಗಳಿಗೆ, ಶಾಲಾ ಕಾಲೇಜುಗಳಿಗೆ (ಅನುದಾನಿತ ಶಿಕ್ಷಣ ಸಂಸ್ಥೆಗಳೂ ಸೇರಿದಂತೆ) ಎಲ್ಲಾ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಕಾರ್ಖಾನೆಗಳಿಗೆ, ನಿಗಮಗಳಿಗೆ ಸ್ಥಳೀಯ ಸಂಸ್ಥೆಗಳಿಗೆ ಮಂಡಳಿಗಳಿಗೆ ಅನ್ವಯವಾಗುವಂತೆ ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

**21-ಶಿವಮೊಗ್ಗ ಲೋಕಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಡುವ ವಿಧಾನ ಸಭಾ ಕ್ಷೇತ್ರಗಳು ಹಾಗೂ ಅವುಗಳ ವ್ಯಾಪ್ತಿಗಳ ಪಟ್ಟಿ**

| ಕ್ರಮ ಸಂಖ್ಯೆ | ವಿಧಾನ ಸಭಾ ಕ್ಷೇತ್ರಗಳು | ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿ |
|---|---|---|
| 1. | 159-ಹೊಳೆಹೊನ್ನೂರು (ಎಸ್.ಸಿ) | ಭದ್ರಾವತಿ ತಾಲ್ಲೂಕು (ಭದ್ರಾವತಿ ನ್ಯೂ ಟೌನ್ ಬೋರ್ಡ್, ಭದ್ರಾವತಿ-1 ಮತ್ತು ಭದ್ರಾವತಿ-2 ಮತ್ತು ಅರ್ಬನ್ ಹೋಬಳಿಗಳನ್ನು ಹೊರತುಪಡಿಸಿ) ಮತ್ತು ಚನ್ನಗಿರಿ ಹೋಬಳಿ (ಶಿವಮೊಗ್ಗ ಉಪವಿಭಾಗದ ಚೆನ್ನಗಿರಿ ತಾಲ್ಲೂಕಿನ ಚೆನ್ನಗಿರಿ ಟೌನ್ ಮತ್ತು 1-ಮುದ್ದೇನಹಳ್ಳಿ, 2-ಬಸ್ಸೇನಹಳ್ಳಿ, 3-ಅಗರಬನ್ನಿಹಟ್ಟಿ 4-ಶ್ರೀಪುರ. 5-ಗುಲ್ಲೇಹಳ್ಳಿ, 6-ರಂಗಾಪುರ 7-ಮಂಗೇನಹಳ್ಳಿ, 8-ಗರಗಾ, 9-ಹೊನ್ನನಾಯ್ಕನಹಳ್ಳಿ, 10-ಹೋಡಿಗೆರೆ, 11-ಶೆಟ್ಟಿಹಳ್ಳಿ, 12-ಮಾದಾಪುರ, 13-ಹೆಬ್ಬಲಗೆರೆ, 14-ಬೆಂಕಿಕೆರೆ, 15-ಗುರುಪುರ, 16-ಮಾಚನಾಯಕನಹಳ್ಳಿ ಕಾವಲ್, 17-ಮಾಚನಾಯಕನಹಳ್ಳಿ, 18-ಹೊನ್ನೇಬಾಗಿ, 52-ಚಿಕ್ಕುಲಿಕೆರೆ ಮತ್ತು 53-ದೋಣಿಹಳ್ಳಿ ಗ್ರಾಮಗಳನ್ನು ಹೊರತುಪಡಿಸಿ). |
| 2. | 160-ಭದ್ರಾವತಿ | ಭದ್ರಾವತಿ ನ್ಯೂ ಟೌನ್ ಬೋರ್ಡ್, ಭದ್ರಾವತಿ-1 ಮತ್ತು ಭದ್ರಾವತಿ-2 ಶಿವಮೊಗ್ಗ ಉಪವಿಭಾಗದ ಭದ್ರಾವತಿ ತಾಲ್ಲೂಕಿನ ಹೋಬಳಿಗಳು. |
| 3. | 162-ಶಿವಮೊಗ್ಗ | ಶಿವಮೊಗ್ಗ ನಗರ ಮತ್ತು ಶಿವಮೊಗ್ಗ ಉಪವಿಭಾಗದ ಶಿವಮೊಗ್ಗ ತಾಲ್ಲೂಕಿನಲ್ಲಿಯ ನಿಡಿಗೆ ಹೋಬಳಿ. |
| 4. | 163-ತೀರ್ಥಹಳ್ಳಿ | ಶಿವಮೊಗ್ಗ ಉಪವಿಭಾಗದ ತೀರ್ಥಹಳ್ಳಿ ತಾಲ್ಲೂಕು ಮತ್ತು ಸಾಗರ ಉಪವಿಭಾಗದ ಹೊಸನಗರ ತಾಲ್ಲೂಕಿನ ನಗರ ಹೋಬಳಿ. |
| 5. | 164-ಹೊಸನಗರ | ಸಾಗರ ಉಪವಿಭಾಗದ ಹೊಸನಗರ ತಾಲ್ಲೂಕು (ನಗರ ಹೋಬ್ಳಿ ಹೊರತುಪಡಿಸಿ), ಶಿವಮೊಗ್ಗ ಉಪವಿಭಾಗದ ಶಿವಮೊಗ್ಗ ತಾಲ್ಲೂಕು (ಶಿವಮೊಗ್ಗ ನಗರ ಮತ್ತು ನಿಡಿಗೆ ಹೋಬ್ಳಿ ಹೊರತುಪಡಿಸಿ). |
| 6. | 165-ಸಾಗರ | ಸಾಗರ ಉಪವಿಭಾಗದ ಸಾಗರ ತಾಲ್ಲೂಕು. |
| 7. | 166-ಸೊರಬ | ಸಾಗರ ಉಪವಿಭಾಗದ ಸೊರಬ ತಾಲ್ಲೂಕು. |
| 8. | 167-ಶಿಕಾರಿಪುರ | ಸಾಗರ ಉಪವಿಭಾಗದ ಶಿಕಾರಿಪುರ ತಾಲ್ಲೂಕು. |

**81-ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕ್ಷೇತ್ರಗಳು:**

| ಕ್ರಮ ಸಂಖ್ಯೆ | ವಿಧಾನ ಸಭಾ ಕ್ಷೇತ್ರಗಳು | ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿ |
|---|---|---|
| 1. | 81-ಚಾಮರಾಜಪೇಟೆ | ಬೆಂಗಳೂರು ಉಪವಿಭಾಗದ ಬೆಂಗಳೂರು ನಗರ ಪಾಲಿಕೆಯಲ್ಲಿ ಬರುವ 25-ಚಾಮರಾಜಪೇಟೆ (ಪಶ್ಚಿಮ), 26-ಚಾಮರಾಜಪೇಟೆ (ಪೂರ್ವ) 27-ಪೋರ್ಟ್, 38-ಟೌನ್‌ಹಾಲ್, 39-ಕಲಾಸಿಪಾಳ್ಯಮ್, 40-ಶ್ರೀ ಚೆನ್ನರಾಯಸ್ವಾಮಿ ಟೆಂಪಲ್ ಮತ್ತು 42-ಧಮರಾಯಸ್ವಾಮಿ ಟೆಂಪಲ್ ವಿಭಾಗಗಳು. |

ಈ ರಜೆಯು ತುರ್ತು ಕೆಲಸಗಳಿಗೆ ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.868

**ಎಸ್. ಜಿಯಾವುಲ್ಲಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ).

## ಸಹಕಾರ ಇಲಾಖೆ

## ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು-52 ಇವರ ನಡವಳಿಗಳು

## ಸಂಖ್ಯೆ: ಆರ್‌ಸಿಎಸ್: ಎಲ್‌ಕ್ಯೂಡಿ:23:2005-06 ದಿನಾಂಕ: 6ನೇ ಜೂನ್ 2005

**ವಿಷಯ :** ಬೆಂಗಳೂರು ನಗರ ಜಿಲ್ಲೆ-1ರ ವ್ಯಾಪ್ತಿಯಲ್ಲಿರುವ 3 ಸಹಕಾರ ಸಂಘಗಳು ಸ್ಥಗಿತಗೊಂಡಿದ್ದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ಇವರ ಪತ್ರ ಸಂ: ಡಿಆರ್‌ಬಿ-1: ಸಮಾಪನೆ:33:2004-05 ದಿನಾಂಕ: 21.3.2005.
2. ಸಂಜೆವಾಣಿ ಪತ್ರಿಕಾ ಪ್ರಕಟಣೆ ದಿನಾಂಕ: 2.03.2005.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆ-1ರ ವ್ಯಾಪ್ತಿಯಲ್ಲಿರುವ

1. ಬೆಂಗಳೂರು ಉತ್ತರ ವಲಯ ಹೆಲ್ತ್ ಅಂಡ್ ಪ್ಯಾಮಿಲಿ ವೆಲ್ಫೇರ್ ಸಹಕಾರ ಸಂಘ ನಿ., ಬೆಂಗಳೂರು ಇದರ ನೋಂದಣಿ ಸಂ: ಆರ್‌ಸಿಎಸ್-14:03:71-72 ದಿನಾಂಕ: 5.12.1972
2. ಬೆಂಗಳೂರು ನಗರ ಜಿಲ್ಲೆ ಕಾರ್ಮಿಕರ ವಿವಿದೋದ್ದೇಶ ಸಹಕಾರ ಸಂಘ ನಿ., ಬೆಂಗಳೂರು ಇದರ ನೋಂದಣಿ ಸಂ: ಕೈಮಇ ಕೈಸ: 3021 ನೋಂದಣಿ: 525:57-58 ದಿನಾಂಕ: 30.05.1958

ಈ ಸಹಕಾರ ಸಂಘಗಳು ಸ್ಥಗಿತಗೊಂಡಿದ್ದು, ಇದರ ಬಗ್ಗೆ ಯಾವುದೇ ಮಾಹಿತಿ ಲಭ್ಯವಾಗಿರುವುದಿಲ್ಲ ಹಾಗೂ ಸದರಿ ಸಂಘಗಳ ವಿಳಾಸಗಳಾಗಲೀ ಅಥವಾ ಬೇರೆ ಯಾವುದೇ ಮಾಹಿತಿಗಳು ಎಷ್ಟೆ ಪ್ರಯತ್ನಪಟ್ಟರೂ ದೊರೆಯದೇ ಇದ್ದುದರಿಂದ ದಿನಾಂಕ: 2.3.2005ರ ಸಂಜೆವಾಣಿ

ದಿನ ಪತ್ರಿಕೆಯಲ್ಲಿ ಪ್ರಕಟಿಸಿ ಸಾರ್ವಜನಿಕರಿಂದಾಗಲೀ ಅಥವಾ ಇತರೆ ಹಣಕಾಸು ಸಂಸ್ಥೆಗಳಿಂದಾಗಲೀ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಕೋರಲಾಗಿತ್ತು ಮತ್ತು 15 ದಿವಸಗಳ ಕಾಲಾವಕಾಶ ನೀಡಲಾಗಿತ್ತು. ಈ ಕಾಲಾವಕಾಶದ ಗಡುವು ದಿನಾಂಕ: 17.3.2005ಕ್ಕೆ ಪೂರ್ಣಗೊಂಡಿರುತ್ತದೆ. ಈ ಮೇಲ್ಕಂಡ 2 ಸಹಕಾರ ಸಂಘಗಳ ಬಗ್ಗೆ ಸಂಘದವರಿಂದಾಗಲೀ, ಸಾರ್ವಜನಿಕರಿಂದಾಗಲೀ ಅಥವಾ ಹಣಕಾಸು ಸಂಸ್ಥೆಗಳಿಂದಾಗಲೀ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲವಾದ್ದರಿಂದ ಈ ಸಂಘಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಲು ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರು ಶಿಫಾರಸ್ಸು ಮಾಡಿರುತ್ತಾರೆ.

ಈ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ. ಹೆಚ್. ಗೋಪಾಲಕೃಷ್ಣೇಗೌಡ, ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ ಮತ್ತು ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಈ ಕೆಳಕಂಡ ಸಹಕಾರ ಸಂಘಗಳಿಗೆ ಮುಂದೆ ನೇಮಿಸಿರುವ ಅಧಿಕಾರಿಗಳನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಿರುತ್ತೇನೆ.

| ಕ್ರ.ಸಂ. | ಸಹಕಾರ ಸಂಘದ ಹೆಸರು | ಸಮಾಪನಾಧಿಕಾರಿಗಳು |
|---|---|---|
| 1. | ಬೆಂಗಳೂರು ಉತ್ತರ ವಲಯ ಹೆಲ್ತ್ ಅಂಡ್ ಫ್ಯಾಮಿಲಿ ವೆಲ್ಫೇರ್ ಸಹಕಾರ ಸಂಘ ನಿ., ಬೆಂಗಳೂರು | ಸಹಕಾರ ಸಂಘಗಳ ಸಹಾಯಕ ನಿಬಂಧಕರು ಒಂದನೇ ವಲಯ, ಬೆಂಗಳೂರು. |
| 2. | ಬೆಂಗಳೂರು ನಗರ ಜಿಲ್ಲೆ ಕಾರ್ಮಿಕರ ವಿವಿದೋದ್ದೇಶ ಸಹಕಾರ ಸಂಘ ನಿ., ಬೆಂಗಳೂರು. | ಸಹಕಾರ ಅಭಿವೃದ್ಧಿ ಅಧಿಕಾರಿ ಬೆಂಗಳೂರು ಉತ್ತರ. |

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಗಳು ಕರ್ತವ್ಯ ನಿರ್ವಹಿಸತಕ್ಕದ್ದು. ಹಾಗೂ ಲೆಕ್ಕ ಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಚೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಯನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 6.6.2005 ರಂದು ನೀಡಲಾಗಿದೆ.

**ಕೆ. ಹೆಚ್. ಗೋಪಾಲಕೃಷ್ಣೇಗೌಡ**

ಪಿ.ಆರ್.869 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ.441) ಹಾಗೂ ವಸೂಲಾಧಿಕಾರಿಗಳ ಕಛೇರಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು-560 027**

**ಸಿ.ಇ.ಪಿ. ಸಂಖ್ಯೆ: ಎಆರ್‌ಇ:ಯುಬಿಎಫ್:1141:05-06 ದಿನಾಂಕ: 9ನೇ ಜೂನ್ 2005**

**ವಿಷಯ :** ತುಮಕೂರು ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ., ಡಾ: ರಾಧಕೃಷ್ಣ ರಸ್ತೆ, ಎಸ್.ಎಸ್. ಪುರಂ, ತುಮಕೂರು ಇವರ ಅಮಲ್ಜಾರಿ ಅರ್ಜಿ ಸಂಖ್ಯೆ: 8/2003-04ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ಸಹಕಾರ ಸಂಘಗಳ ನಿಯಮದ ಕ್ರಮ ಸಂಖ್ಯೆ 38(6) (ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ :**
1. ದಾವಾ ಸಂಖ್ಯೆ: 3564/01-02
2. ಅಮಲ್ಜಾರಿ ಅರ್ಜಿ ಸಂಖ್ಯೆ: 8/2003-04
3. ಮಾರಾಟಾಧಿಕಾರಿಯವರ ವರದಿ ದಿನಾಂಕ: 28.12.2004.

**ಪ್ರಸ್ತಾವನೆ:**

ಶ್ರೀ ಎನ್. ಸುರೇಂದ್ರನಾಥ್ ಬಿನ್ ಟಿ. ನಾರಾಯಣಸ್ವಾಮಿ, ನೀಲಾದ್ರಿ, 1ನೇ ಕ್ರಾಸ್, 1ನೇ ಮೇನ್, ಆದರ್ಶನಗರ ತುಮಕೂರು ಇವರು ತುಮಕೂರು ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ., ಡಾ: ರಾಧಕೃಷ್ಣ ರಸ್ತೆ, ಎಸ್.ಎಸ್. ಪುರಂ. ತುಮಕೂರು ಈ ಬ್ಯಾಂಕಿನಿಂದ ದಿನಾಂಕ: 19.02.2001 ರಂದು ರೂ.28,00,000-00 ಗಳನ್ನು (ರೂಪಾಯಿ ಇಪ್ಪತ್ತೆಂಟು ಲಕ್ಷ ಮಾತ್ರ) ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರನ್ವಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: 3564/01-02 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶದನ್ವಯ ವೀರಶೈವ ಸಹಕಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 34 (1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಈ ಕಛೇರಿಯಲ್ಲಿ ಅಮಲ್ಜಾರಿ ಅರ್ಜಿ ಸಂಖ್ಯೆ:8/2003-04 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ: 28.12.2004 ರಂದು ಸಾರ್ವಜನಿಕ ಹರಾಜಿಗೆ ತರಲಾಗಿತ್ತು. ಸದರಿ ದಿನ ನಡೆಸಿದ ಹರಾಜಿನಲ್ಲಿ 12 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಟಿ. ಜೆ. ಬದರೀನಾಥ್ ಬಿನ್ ಜಯಪ್ಪ ಶೇಡ್ ನಂ. 3, ಮಂಜುಳಾ ಎಂಟರ್ ಪ್ರೈಸಸ್, ಖಾದಿ ಕಾಂಪ್ಲೆಕ್ಸ್, ಇಂಡಸ್ಟ್ರಿಲ್ ಎಸ್ಟೇಟ್, ಬಿ. ಹೆಚ್. ರಸ್ತೆ, ತುಮಕೂರು ಇವರು ರೂ.12,10,000.00 ಗಳಿಗೆ (ರೂಪಾಯಿಗಳು ಹನ್ನೆರಡು ಲಕ್ಷದ ಹತ್ತು ಸಾವಿರ ಮಾತ್ರ) ಬಿಡ್ಡು ಮಾಡಿದ್ದು, ಅತೀ ಹೆಚ್ಚಿನ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಯನ್ವಯ ಅಸಲು ರೂ.26,24,841.00 ಗಳು ಬಡ್ಡಿ ಮತ್ತು ಇತರೆ ವೆಚ್ಚ ರೂ.4,00,432.00 ಒಟ್ಟು ರೂ.30,25,273.00 ಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ. 12,10,000.00ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಟಿ. ಜೆ. ಬದರೀನಾಥ್

ಬಿಡ್ಡಿನ ಮೊತ್ತದ ಶೇಕಡಾ 15, ರೂ.1,81,500.00 ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿಮಾಡಿರುತ್ತಾರೆ. ಉಳಿಕೆ ಬಾಕಿ ಮೊತ್ತ ದಿನಾಂಕ: 28.01.2005 ರಂದು ರೂ.10,28,500.00ಗಳನ್ನು ಪಾವತಿಮಾಡಿರುತ್ತಾರೆ.

ತುಮಕೂರು ವೀರಶೈವ ಸಹಕಾರ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 28.12.2004 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಶ್ರೀ ಎನ್. ಸುರೇಂದ್ರನಾಥ್ ಬಿನ್ ಟಿ. ನಾರಾಯಣಸ್ವಾಮಿರವರ ಸ್ಥಿರಾಸ್ತಿಯನ್ನು ಶ್ರೀ ಟಿ. ಜೆ. ಬದರೀನಾಥ್ ಬಿನ್ ಶ್ರೀ ಜಯಪ್ಪರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂ ಗೊಳಿಸಬೇಕೆಂದು ಉಲ್ಲೇಖ (3)ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 28.12.2004 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 12 ಜನ ಬಿಡ್ಡುದಾರರು ಭಾಗವಹಿಸಿದ್ದು. ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಟಿ. ಜೆ. ಬದರೀನಾಥ್ ಬಿನ್ ಶ್ರೀ ಜಯಪ್ಪ ಇವರಿಗೆ ರೂ.12,10,000.00 ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ: 28.12.2004 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ದವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

ಎಸ್. ಎಸ್. ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ)ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ:8/2003-04ರಲ್ಲಿ ಶ್ರೀ ಎನ್. ಸುರೇಂದ್ರನಾಥ್ ಬಿನ್ ಶ್ರೀ ಟಿ. ನಾರಾಯಣಸ್ವಾಮಿ ಸದಸ್ಯತ್ವ ಸಂಖ್ಯೆ: ಎ. 00737 ಇವರಿಗೆ ಸೇರಿದ ಸ್ಥಿರಾಸ್ಥಿಯನ್ನು ದಿನಾಂಕ: 28.12.2004 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಟಿ. ಜೆ. ಬದರೀನಾಥ್ ಬಿನ್ ಶ್ರೀ ಜಯಪ್ಪ, ಷೆಡ್ ನಂ.3, ಮಂಜುಳಾ ಎಂಟರ್ ಪ್ರೈಸಸ್, ಖಾದಿ ಕಾಂಪ್ಲೆಕ್ಸ್, ಇಂಡಸ್ಟ್ರಿಯಲ್ ಎಸ್ಟೇಟ್, ಬಿ. ಹೆಚ್. ರಸ್ತೆ, ತುಮಕೂರು ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.12,10,000.00 ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ಥಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ತುಮಕೂರು ನಗರ ಇಂಡಸ್ಟ್ರಿಯಲ್ ಎಸ್ಟೇಟ್‌ನಲ್ಲಿರುವ ಸಿ.25 ಪ್ಲಾಟ್ ಹಾಗೂ ಇದರಲ್ಲಿರುವ ಕೈಗಾರಿಕಾ ಷೆಡ್ ಸೇರಿ ಅಳತೆ ಪೂರ್ವ-ಪಶ್ಚಿಮ 14.23 ಮೀಟರ್ಸ್ x ಉತ್ತರ-ದಕ್ಷಿಣ 25.13 ಮೀಟರ್ಸ್ ಆಗಿದ್ದು, ಇದರ ಚೆಕ್ಕುಬಂದಿ

ಪೂರ್ವಕ್ಕೆ ಸತ್ಯನಾರಾಯಣ ಮತ್ತು ಇತರರ ಬಾಬ್ತು ಕೈಗಾರಿಕಾ ಷೆಡ್,
ಪಶ್ಚಿಮಕ್ಕೆ ಮಂಜುಳ ಎಂಟರ್ ಪ್ರೈಸಸ್,
ಉತ್ತರಕ್ಕೆ ಪಿ.ಎಸ್.ವಿ. ಇಂಡಸ್ಟ್ರೀಸ್,
ದಕ್ಷಿಣಕ್ಕೆ ರಸ್ತೆ,
ಮಾರಾಟದ ಮೊಬಲಗು ರೂ.12,10,000.00
ಮಾರಾಟ ಮಾಡಿದ ದಿನಾಂಕ: 28.12.2004

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 10.06.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ.441)
ಹಾಗೂ ವಸೂಲಾಧಿಕಾರಿಗಳು,
ಕರ್ನಾಟಕ ರಾಜ್ಯ ಸಹಕಾರ ಪಟ್ಟಣ,
ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

ಪಿ.ಆರ್.864

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

## ಪ್ರಕಟಣೆ

### ಸಂಖ್ಯೆ: ಜಿಪಕಅ (ನ)ಯೋ:ಸಿಆರ್-19/2005-06 ದಿನಾಂಕ: 3ನೇ ಜೂನ್ 2005

**ವಿಷಯ :** 2005-06ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

2005-06ನೇ ಸಾಲಿನ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ತರಬೇತಿ ನೀಡಲು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಅದರಂತೆ ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಿದಲ್ಲಿ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. **ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವವರು ಮಾತ್ರ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.**

**ಷರತ್ತುಗಳು:**

1. ಅಭ್ಯರ್ಥಿಗಳು 35 ವರ್ಷ ವಯೋಮಿತಿಯಲ್ಲಿರಬೇಕು.
2. ಅರ್ಜಿಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು.
3. ತರಬೇತಿಯ ಅವಧಿಯು 4 ವರ್ಷಗಳಾಗಿದ್ದು ಮಾಸಿಕ ರೂ.1000-00 ಶಿಷ್ಯ ವೇತನ ನೀಡಲಾಗುವುದು.

4. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಗೆ ನಿಯೋಜಿಸಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟುಹೋಗಬಾರದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ದಿಮೆಯಲ್ಲಿ ನೇಮಕ ಹೊಂದುವವರಿಗೆ ಅನ್ವಯಿಸುವುದಿಲ್ಲ.
6. ಸುಳ್ಳು ದಾಖಲೆ, ಮಾಹಿತಿಯನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನನ್ವಯ ಶಿಕ್ಷೆಗೆ ಗುರಿಪಡಿಸಲಾಗುವುದು. ಅನಂತರ ಅಭ್ಯರ್ಥಿಗಳಿಂದ ತರಬೇತಿಯ ಅವಧಿಯಲ್ಲಿ ನೀಡಿದ ಶಿಷ್ಯವೇತನವನ್ನು ಶೇ.10 ರಷ್ಟು ಬಡ್ಡಿಯೊಂದಿಗೆ ವಸೂಲಿಮಾಡಲಾಗುವುದು.
7. ಬೆಂಗಳೂರು ನಗರ ಜಿಲ್ಲೆಯ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿಸಲ್ಲಿಸುವುದು.
8. ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದ ಪಕ್ಷದಲ್ಲಿ, ಅರ್ಜಿ ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
10. ಅರ್ಜಿ ಪಡೆಯಲು ಮತ್ತು ಸಲ್ಲಿಸಲು ಪೂರ್ಣವಿಳಾಸ ಕೆಳಕಂಡಂತಿದೆ.

**ವಿಳಾಸ :** ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ 4ನೇ ಮುಖ್ಯ ರಸ್ತೆ 16ನೇ ಅಡ್ಡ ರಸ್ತೆ ಪೊಲೀಸ್ ಠಾಣೆ ಹತ್ತಿರ ಸಂಪಂಗಿರಾಮನಗರ, ಬೆಂಗಳೂರು-560 027.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.870

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಡೈರಿ ಸರ್ಕಲ್ ಹತ್ತಿರ, ಬೆಂಗಳೂರು-29

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-15/2005-06 ದಿನಾಂಕ: 13ನೇ ಜೂನ್ 2005**

**ಅರ್ಜಿದಾರರು :**
1. ಮೃತ ಜಿ. ಮುನಿಕೆಂಪಯ್ಯ, ನಂ. 377:1, 43, ನೇ ಕ್ರಾಸ್, ಗಂಗ್‌ಧನಗರ್, ಹೆಗ್ಗನಹಳ್ಳಿ, ಬೆಂಗಳೂರು-91.

**ವಿರುದ್ಧ**

**ಪ್ರತಿವಾದಿಗಳು:**
1. ಎಕ್ಸಿಕ್ಯೂಟೀವ್ ಇಂಜಿನಿಯರ್, (ಎಲೆಕ್ಟ್ರಿಕಲ್) ಜಿಒ ಅಂಡ್ ಎಂ. ಡಿವಿಜನ್, ಅಡಿಷನಲ್ ನಾರ್ತ್ ಡಿವಿಜನ್, ಬೆಸ್‌ಕಾಂ, ಪೀಣ್ಯ, ಬೆಂಗಳೂರು-58.

**ಪ್ರಕಟಣೆ**

ಈ ಮೇಲೆ ಕಾಣಿಸಿದ ಮೃತ ಜಿ. ಮುನಿಕೆಂಪಯ್ಯ, ಇವರು ಪ್ರತಿವಾದಿ ಸಂಸ್ಥೆಯಲ್ಲಿ ಲೈನ್‌ಮೆನ್ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 3.3.05 ರಂದು ಮೃತ ಪಟ್ಟಿರುತ್ತಾರೆ.

ಪ್ರತಿವಾದಿಗಳು ಕಾಯ್ದೆಯನ್ವಯ ಪರಿಹಾರ ಹಣವನ್ನು ಈ ನ್ಯಾಯಾಲಯಕ್ಕೆ ಠೇವಣಿ ಮಾಡಿರುತ್ತಾರೆ. ಕಾರಣ ಸದರಿ ಮೃತ ಮುನಿಕೆಂಪಯ್ಯರವರ ಅವಲಂಭಿತರರು ತಿಳಿಸಿ ಅವರಿಗೆ ಪರಿಹಾರದ ಹಣವನ್ನು ಕೊಡಿಸಲು ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು" ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮದ್ ಯುಸುಫ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-1 ಬೆಂಗಳೂರು-560 002.

ಪಿ.ಆರ್.872

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಡೈರಿ ಸರ್ಕಲ್ ಹತ್ತಿರ, ಬೆಂಗಳೂರು-29

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-14/2005-06 ದಿನಾಂಕ: 13ನೇ ಜೂನ್ 2005**

**ಅರ್ಜಿದಾರರು :**
1. ಶ್ರೀಮತಿ ಎನ್. ಮಂಜುಳಾ ಕೋಂ ಲೇಟ್ ಎನ್. ಮಾಧವ ನಂ. ಎ173, ಸೆಕ್ಟರ್ 2, ಹೆಚ್. ಎಂ.ಟಿ. ಕಾಲೋನಿ ಬೆಂಗಳೂರು-31.

**ವಿರುದ್ಧ**

**ಪ್ರತಿವಾದಿಗಳು:**
1. ಆಡಳಿತವರ್ಗದವರು, ಮೆ: ಹೆಚ್.ಎಂ.ಟಿ. ಮೆಷಿನ್, ಅಂಡ್ ಟೂಲ್ಸ್, ಪ್ರೈ ಲಿ., ಜಾಲಹಳ್ಳಿ, ಬೆಂಗಳೂರು-31.

**ಪ್ರಕಟಣೆ**

ಈ ಮೇಲೆ ಕಾಣಿಸಿದ ಅರ್ಜಿದಾರರು ದಿನಾಂಕ: 9.6.2005 ರಂದು ಈ ಮೇಲೆ ಹೇಳಲಾದ ಪ್ರತಿವಾದಿಯ ವಿರುದ್ಧ ಬೇಡಿಕೆ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ಅವರ ಮೃತ ಗಂಡ ಲೇಟ್ ಮಾಧವ ಅವರು ಪ್ರತಿವಾಧಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ದಿನಾಂಕ: 7.4.2005 ರಂದು ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆ. ಎಂದು ತಿಳಿಸಿರುತ್ತಾರೆ.

ಹಾಗೂ ಅರ್ಜಿದಾರರು ಮೃತ ಮಾಧವ ಅವರ ಅವಲಂಬಿತರೆಂದು ತಿಳಿಸಿ ಕಾಯ್ದೆಯನ್ವಯ ಪ್ರತಿವಾದಿಗಳಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು" ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ

ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮದ್ ಯುಸುಫ್**

ಪಿ.ಆರ್.873

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-1 ಬೆಂಗಳೂರು-560 002.

**DISTRRICT & SESSIONS COURT, GULBARGA**
**(Competent authority, Under Rule 4 of Notaries Rules 1956**
**NOTICE Dated: 8th June 2005**

**Sub :** Appointment of Notary for Shahapur Taluka, which is vacant due to death of Sri. S. B. Sani, Notary.

**Ref :**
1. Government of Karnataka Letter No. LAW 116 LCL 2004, dated: 02.04.2005 permitting to call for the application from Advocates, who are eligible for the post of Notary.
2. District Court Gulbarga Notification No. 2/2005 dated: 16.04.2005.
3. Office note dated: 16.05.2005 and Order dated: 2.06.05.

It is hereby brought to the notice of public that the following Advocates have submitted their Memorial for appointment of Notary for Shahapur Taluk in Gulbarga District.

1. Sri Malipatil Mallikarjun
2. Sri. Tukaram Ghawalkar
3. Sri S. Gopal
4. Sri Inayatur Rehaman Siddiqui

Therefore, persons having any objections for appointment of above Advocates as Notary for Shahapur Taluk may submit their objection to the undersigned within 15 days from the date of publication of notice in the Official Gazette.

**B. A. MUCHANDI**

PR-874

Prl. District Sessions Judge, Gulbarga.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಡಣಾಪುರ ಗ್ರಾಮದಲ್ಲಿ ಪಿಂಕ್ ಪಾರ್‌ಫರಿ ಗ್ರಾನೈಟ್‌ಗಾಗಿ ಮೆ: ಗುಲ್‌ಮೊಹರ್ ಗ್ರಾನೈಟ್ಸ್ ಪ್ರೈ.ಲಿ., ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 075ರ ಗುತ್ತಿಗೆಯನ್ನು, ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ: ಕಗಗು:075:2004-05 4076 ದಿನಾಂಕ: 26.10.2004.
2. ಉಪ ನಿರ್ದೇಶಕರು, ತುಮಕೂರು ರವರ ಪತ್ರ ಸಂಖ್ಯೆ: ಗಭೂಇ: ಉನಿತು: ಕಗಗು:075:2004-05:726 ದಿನಾಂಕ: 13.05.2005.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಡಣಾಪುರ ಗ್ರಾಮದ ಸರ್ವೆ ನಂ.42 ರಲ್ಲಿ ಮೆ: ಗುಲ್‌ಮೊಹರ್ ಗ್ರಾನೈಟ್ಸ್ ಪ್ರೈ.ಲಿ., ರವರಿಗೆ 6.00 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 075 ಇದ್ದು, ಸದರಿ ಗುತ್ತಿಗೆಯು ದಿನಾಂಕ: 15.05.1997 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 2ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.6,03,819/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿದ್ದು, ಗುತ್ತಿಗೆಯ ಮೇಲಿನ ಸ್ಥಿರ ತೆರಿಗೆ ಬಾಕಿ ಪಾವತಿಸದೆ ಇರುವ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಡಿಸಿಬಿ:ಕಗಗು:075:2005-06 ದಿನಾಂಕ**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕಿನ, ಡಣಾಪುರ ಗ್ರಾಮದ ಸರ್ವೆ ನಂ.42 ರಲ್ಲಿ 6.00 ಎಕರೆಗೆ ಪಿಂಕ್ ಪಾರ್‌ಫರಿ ಗ್ರಾನೈಟ್‌ಗಾಗಿ ಮೆ: ಗುಲ್‌ಮೊಹರ್ ಗ್ರಾನೈಟ್ಸ್ ಪ್ರೈ.ಲಿ., ರವರ ಹೆಸರಿನಲ್ಲಿನ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 075ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು,

ಪಿ.ಆರ್.875

ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.